# ಸಾಂಗತ್ಯ

ತಿಂಗಳ ಪತ್ರಿಕೆ ಸೆಪ್ಟೆಂಬರ್ 1995

❖ ಮಕ್ಕಳ ಮೇಲಿನ ಲೈಂಗಿಕ ಶೋಷಣೆ

❖ ಹಮೀದಾಳ ದುಃಸ್ವಪ್ನ

❖ ಚಳುವಳಿ ಎಂದರೇನು ?

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 12 ಸಂಚಿಕೆ : 4

ಸೆಪ್ಟೆಂಬರ್ - 1995

**ಸಂಪಾದಕೀಯ ಮಂಡಳಿ :**

ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ಸರಸ್ವತಿ ದು.,
ಸವಿತ ಎ., ಗಾಯತ್ರಿ ವಿ.

**ಸಲಹೆ-ಸಹಕಾರ**

ಇಳಾ ವಿಜಯಾ

**ಸಹ ಸಂಪಾದಕರು :**

ವನಜಾ ವೆಂ.
ಡಾ॥ ಪ್ರಭಾವತಿ ಎಸ್. ವಿ.
ನೀಲಾಂಜನ

ವಿಳಾಸ :

**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067

**ಸಂಪರ್ಕ ವಿಳಾಸ**

ನಂ. 457, 12ನೇ ಅಡ್ಡರಸ್ತೆ,
ಪಶ್ಚಿಮ ಕಾರ್ಡ್‌ರಸ್ತೆ, 2ನೇ ಹಂತ
ಮಹಾಲಕ್ಷ್ಮೀಪುರ, ಬೆಂಗಳೂರು–560 086

ಸೂಚನೆ : ಬಿಡಿ ಪ್ರತಿ : **3-00 ರೂ.**
ವಾರ್ಷಿಕ ಚಂದಾ : **25 ರೂ.**
ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು


**ಈ ಸಂಚಿಕೆಯಲ್ಲಿ...**




ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭



# ಸಂಪಾದಕೀಯ

ಮಕ್ಕಳ, ಅದರಲ್ಲೂ ವಿಶೇಷವಾಗಿ ಹೆಣ್ಣುಮಕ್ಕಳ ಮೇಲಾಗುವ ಲೈಂಗಿಕ ಶೋಷಣೆಯನ್ನು ಸ್ಪಷ್ಟವಾಗಿ ವ್ಯಕ್ತಪಡಿಸಲು ಪ್ರಾರಂಭವಾಗಿರುವ ಪ್ರಸ್ತುತ ಸಂದರ್ಭದಲ್ಲಿ ಮಾನಸದ ಈ ಸಂಚಿಕೆಯಲ್ಲಿ ಅದಕ್ಕೆ ಹೆಚ್ಚು ಒತ್ತು ಕೊಡಲು ಪ್ರಯತ್ನಿಸಲಾಗಿದೆ. ಮಕ್ಕಳು ತೀರಾ ದುರ್ಬಲರು, ಅಧಿಕಾರ ವ್ಯವಸ್ಥೆಯ ಹಿಡಿತದಲ್ಲಿ ಬಲುಬೇಗ ಸುಲಭದಲ್ಲಿ ಬಲಿಪಶುಗಳಾಗಿ ಬಿಡಬಲ್ಲಂತವರು. ಇವರು ದೊಡ್ಡವರ ಮೇಲೆ ಸಂಪೂರ್ಣ ಅವಲಂಭಿತರಾಗಿದ್ದು ಕುಟುಂಬದಂತಹ ವ್ಯವಸ್ಥೆಯಲ್ಲಿ ಪೂರ್ಣ ಭದ್ರತೆಯನ್ನು ಕಾಣುತ್ತಿರುತ್ತಾರೆ. ವಿಪರ್ಯಾಸವೆಂದರೆ, ಯಾವ ಕುಟುಂಬ ಮಗುವಿಗೆ ಬೇಕಾದ ಭದ್ರತೆಯನ್ನು ಒದಗಿಸುತ್ತದೆಯೆಂಬ ನಂಬಿಕೆಯಿದೆಯೋ ಅದೇ ಕುಟುಂಬವೇ ಮಗುವಿನ ಮೇಲಿನ ಲೈಂಗಿಕ ಕಿರುಕುಳದ ಮೂಲಸ್ಥಾನ ಮತ್ತು ಯಾವ ಹತ್ತಿರದ ಸಂಬಂಧಿಕರು ಮಗುವಿನ ರಕ್ಷಕರೆಂಧು ನಂಬಲಾಗುತ್ತದೋ ಅವರೇ ಇಲ್ಲಿ ಬಹುಮುಖ್ಯ ಶೋಷಕರು. ಆದರೆ ಈ ವಾಸ್ತವವನ್ನು ಒಪ್ಪಲು ಮಾತ್ರ ಯಾರೂ ಸುಲಭದಲ್ಲಿ ತಯಾರಿಲ್ಲ. ಮಕ್ಕಳ ಮೇಲಿನ ಲೈಂಗಿಕ ಶೋಷಣೆಯ ಪ್ರಶ್ನೆಯನ್ನು ಕೈಗೆತ್ತಿಕೊಳ್ಳುವಾಗ ಇದನ್ನು ಬಯಲಿಗೆಳೆಯಲೇ ಬೇಕಾಗುತ್ತದೆ.

ಇದರ ಜತೆಗೆಯೇ ಬೇರೆ ಬೇರೆ ಸಾಮಾಜಿಕ ಸ್ತರಗಳಲ್ಲಿ ಮಕ್ಕಳ ಮೇಲಿನ ಲೈಂಗಿಕ ಶೋಷಣೆಯ ತೀವ್ರತೆ ಬೇರೆ ಬೇರೆಯಾಗಿರುತ್ತದೆಂಬುದನ್ನು ಒಪ್ಪಬೇಕಾಗುತ್ತದೆ. ಯಾವುದೇ ಸಾಮಾಜಿಕ ಭದ್ರತೆ ಇಲ್ಲದ ಮಕ್ಕಳು ಒಳಗಾಗುವ ಲೈಂಗಿಕ ಶೋಷಣೆ ತೀವ್ರತರದ್ದು. ಹೊರಗೆ ದುಡಿಯುವ, ಸೂಕ್ತ ವಸತಿ ವ್ಯವಸ್ಥೆಯಿಲ್ಲದ ಕುಟುಂಬಗಳ ಮಕ್ಕಳು ಅಧಿಕಪಟ್ಟು ಬಲಿಪಶುಗಳಾಗುವ ಸಾಧ್ಯತೆ ಹೊಂದಿರುತ್ತಾರೆ. ಹಮೀದಾಳಂತ 'ಗತಿ'ಯಿಲ್ಲದ ಹುಡುಗಿಯ ಕತೆಯೊಂದು ಜ್ವಲಂತ ನಿದರ್ಶನ ಇಲ್ಲಿ.

ಅದೇ ಸಮಯದಲ್ಲಿ ಪಿತೃಪ್ರಧಾನ ಸಂರಚನೆಯ ಪೋಲೀಸು, ನ್ಯಾಯಾಂಗ ವ್ಯವಸ್ಥೆಗಳು ಇಲ್ಲಿ ಯಾವುದೇ ರೀತಿಯಲ್ಲಿ ಸಹಾಯಕ್ಕೆ ಬರದೇ, ಬದಲಾಗಿ ತಾವೇ ಶೋಷಣೆಯ ತಾಣವಾಗಿರುವುದು ವಿಪರ್ಯಾಸ ಮತ್ತು ನಾವೆಲ್ಲ ಎದುರಿಸಬೇಕಾಗಿರುವ ಕಟುವಾಸ್ತವ.

ಮಹಿಳಾ ಚಳವಳಿಗೆ ಚಾಲನ ಶಕ್ತಿಯಾಗಿ ಕೆಲಸ ಮಾಡಿದ್ದೇ ಅವಯಸ್ಕ ಗಿರಿಜನ ಹುಡುಗಿ ಮಥುರಾಳ ಮೇಲಿನ ಅತ್ಯಾಚಾರದ ಘಟನೆಯಾದರೂ, ಮಕ್ಕಳ ಮೇಲಿನ ಲೈಂಗಿಕ ಶೋಷಣೆಗೆ ಮಹಿಳಾ ಚಳವಳಿ ಒತ್ತುಕೊಡಲು ಪ್ರಾರಂಭಿಸಿದ್ದು ಇತ್ತೀಚೆಗಷ್ಟೇ. ಅವಯಸ್ಕ ಮಕ್ಕಳು ಒಳಗಾಗುವ ಲೈಂಗಿಕ ಶೋಷಣೆಯನ್ನು ವ್ಯಕ್ತಪಡಿಸಲೂ ಮಹಿಳಾ ಚಳವಳಿ ಇದೀಗ ಹೆಚ್ಚು ಅವಕಾಶ ಸೃಷ್ಟಿಸುತ್ತಿದೆ. ವಿವಿಧ ಸಾಮಾಜಿಕ ಗುಂಪುಗಳ ಸಂದರ್ಭದಲ್ಲಿ ಇರುವ ನಿರ್ದಿಷ್ಟತೆಗಳಿಗೆ ಹೆಚ್ಚು ಗಮನ ಹರಿಸುವುದು ಇಲ್ಲಿ ಮುಖ್ಯವಾಗುತ್ತದೆ.

# ಮಕ್ಕಳ ಮೇಲಿನ ಲೈಂಗಿಕ ಶೋಷಣೆ

## ಭಯ, ಗುಟ್ಟು ಮತ್ತು ಅವಮಾನಗಳಾಚೆಗೆ.......

ಲೈಂಗಿಕ ಶೋಷಣೆಯ ಬಗ್ಗೆ ಮಾತನಾಡುವುದು ತೊಡಕಿನ ವಿಷಯ ಏಕೆಂದರೆ ಲೈಂಗಿಕತೆ ಹಾಗೂ ಲೈಂಗಿಕ ಶೋಷಣೆಯ ಸುತ್ತ ಅನೇಕ ನಿಷೇಧಗಳು ಇವೆ. ಇದರ ಬಗ್ಗೆ ಮಾತನಾಡುವುದು ಮತ್ತಷ್ಟು ಕಷ್ಟವೇಕೆಂದರೆ ಇದು ಹೆಚ್ಚು ಗೋಚರವಾಗದ, ಸಂಕೀರ್ಣ ಸಮಸ್ಯೆ. ಮಕ್ಕಳ ಮೇಲಾಗುವ ಲೈಂಗಿಕ ಶೋಷಣೆಯನ್ನು ಗುರುತಿಸಲು, ಅರಿಯಲು ನಿಮಗೆ ಈ ಕಿರುಪುಸ್ತಿಕೆಯು ಸಹಾಯ ಮಾಡಲು ಯತ್ನಿಸುತ್ತದೆ. ದೊಡ್ಡವರಿಗೆ ಭಯಪಟ್ಟು ಮಕ್ಕಳು ತಮ್ಮ ಮೇಲಾದ ಅನ್ಯಾಯದ ಬಗ್ಗೆ ಹೇಳದೆ, ಒಬ್ಬರೇ ಮೌನದಿಂದ ನೋವುಗಳನ್ನು ಎದುರಿಸುತ್ತಿರುತ್ತಾರೆ. ಈ ಸತ್ಯವನ್ನು ಗುರುತಿಸಬೇಕೆಂಬುದು ಈ ಪುಸ್ತಿಕೆಯ ಆಶಯ. ಅಲ್ಲದೆ ಆದ ಅನುಭವದ ಬಗ್ಗೆ ಅನಿಸುವ ಅವಮಾನ ನಾಚಿಕೆಯ ಭಾವನೆ ಹೇಗೆ ಈ ಅಕ್ರಮವು ಬೆಳೆಯುವುದಕ್ಕೆ ಪೂರಕವಾಗಿದೆ ಎಂಬುದನ್ನು ಗುರುತಿಸಬೇಕಾಗಿದೆ. ನಮ್ಮ ಮಗುವಿನ ನಾಚಿಕೆ, ಅವಮಾನಗಳು ಶೋಷಕನಿಗೆ ರಕ್ಷೆ ನೀಡುತ್ತಿವೆ. ಹಾಗೂ ನಮ್ಮ ಹಾಗೂ ಮಗುವಿನ ನಡುವಿನ ಸಂವಾದಕ್ಕೆ ತೊಡಕಾಗಿವೆ. ಇವೆಲ್ಲವನ್ನು ಗುರುತಿಸಲು ಈ ಪುಸ್ತಿಕೆಯು ಸಹಾಯ ಮಾಡುತ್ತದೆ. ಅಲ್ಲದೆ ನೀವು ನಿಮ್ಮ ಮಗುವನ್ನು ಹೇಗೆ ಶೋಷಣೆಯಿಂದ ರಕ್ಷಿಸಬಹುದೆಂಬುದನ್ನು ತಿಳಿಸಲಾಗಿದೆ.

### ಮಕ್ಕಳ ಮೇಲಿನ ಲೈಂಗಿಕ ಶೋಷಣೆ ಎಂದರೇನು ?

(ಅ) ಸೀತಾಗೆ ಏಳು ವರ್ಷ ವಯಸ್ಸು. ಅವಳಿಗೆ ತನ್ನ ತಾತ ಅಜ್ಜಿಯೆಂದರೆ ಬಹಳ ಅಚ್ಚು-ಮೆಚ್ಚು. ಹೀಗಾಗಿ ಅವರೊಡನೆ ಅವಳು ಸಾಕಷ್ಟು ಕಾಲ ಕಳೆಯುತ್ತಾಳೆ. ಈಗೀಗ ಅವಳ ತಾತ ಅವಳನ್ನು ತನ್ನ ತೊಡೆಯ ಮೇಲೆ ದೀರ್ಘಕಾಲ ಕೂರಿಸಿಕೊಳ್ಳುತ್ತಾನೆ. ಹಾಗೂ ಅವಳ ಕಾಲುಗಳನ್ನು, ಒಳ ತೊಡೆಯನ್ನು ನೇವರಿಸುತ್ತಾನೆ. ತನ್ನ ಹಿಂಬದಿಯಿಂದ ಆತನ ಶಿಶ್ನ ಸೆಟೆದು ಕೂಂಡಿರುವುದು ಅವಳಿಗೆ ಗೊತ್ತಾಗುತ್ತದೆ. ಒಮ್ಮೊಮ್ಮೆ ಆತ ಬಟ್ಟೆಯ ಮೂಲಕವೇ ತನ್ನ ಶಿಶ್ನವನ್ನು ಮುಟ್ಟಲು ಅವಳಿಗೆ ಹೇಳುತ್ತಾನೆ. ಸೀತಾಳಿಗೆ ಏನು ನಡೆಯುತ್ತಿದೆ ಎಂಬುದು ತಿಳಿಯುತ್ತಿಲ್ಲ. ಆದರೆ ತಾತನ ಮಡಿಲಲ್ಲಿ ಕೂರಲು ಹಿಂಜರಿಯುತ್ತಾಳೆ. ಏಕೆಂದರೆ ಅವಳಿಗೆ ಇದೊಂದು ಅಸಮಾಧಾನ ತರುವ ಕೆಲಸವಾಗಿದೆ. ಅವಳೇನು ಮಾಡಬೇಕೆಂದು ತಿಳಿಯುತ್ತಿಲ್ಲ. ಆದರೆ ಅವಳೊಳಗೆ ತಿಳಿಯದ ತಳಮಳ ಉಂಟಾಗಿದೆ. ಆದರೂ ಆಕೆ ತಾತನನ್ನು ತುಂಬಾ ಪ್ರೀತಿಸುವುದರಿಂದ ಆತ ತನ್ನನ್ನು ಮುಟ್ಟಲು, ಸವರಲು ನಿರಾಕರಿಸುವುದಿಲ್ಲ. ಆದರೂ ಮುಜುಗರ ಮಾತ್ರ ಇದ್ದೇ ಇರುತ್ತದೆ. ಸೀತಾಳ ತಾತ ಅವಳ ಯೋನಿಯನ್ನು ಮುಟ್ಟಿಲ್ಲ ಅಥವಾ ಅವಳಿಗೆ ತನ್ನ ಶಿಶ್ನವನ್ನು ಪ್ರದರ್ಶಿಸುವುದಾಗಲೀ ಮಾಡಿಲ್ಲ. ಹಾಗಿದ್ದಲ್ಲಿ ಆತ ಸೀತಾಳನ್ನು ಲೈಂಗಿಕವಾಗಿ ಶೋಷಿಸುತ್ತಿದ್ದಾನೆಯೇ ? ಹೌದು.

(ಆ) ಹದಿಹರೆಯದ ಕಾಮಿನಿಗೆ ಆಗಾಗ ಬೀಳುವ ದುಃಸ್ವಪ್ನಗಳು ಅವಳನ್ನು ವಾರಗಟ್ಟಲೆ ಗಲಿಬಿಲಿಗೊಳಿಸುತ್ತವೆ. ಕನಸಿನಲ್ಲಿ ಅವಳು ಒಂದು ಕತ್ತಲೆಯ ಕೋಣೆಯಲ್ಲಿರುತ್ತಾಳೆ. ಕೋಣೆಯ ಒಂದು ಗೋಡೆಯ ಮೇಲೆ ಮಾತ್ರ ಬೆಳಕಿದೆ. ಭಯಂಕರವಾದ ದೊಡ್ಡ ಕೈಯೊಂದು ಅವಳನ್ನು ಭದ್ರವಾಗಿ ಅಲುಗಾಡದಂತೆ ಹಿಡಿದುಕೊಳ್ಳುತ್ತದೆ. ಆ ಗೋಡೆಯ ಮೇಲೆ ನಗ್ನ ಗಂಡಸರ, ಹೆಂಗಸರ ಮಕ್ಕಳ ಬಿಂಬಗಳನ್ನು ಕಾಣುತ್ತಾಳೆ. ಅವರ ಚಲನವಲನಗಳು ಕಾಮಿನಿಗೆ ಅರ್ಥವಾಗುವುದಿಲ್ಲ. ಅಂಟು ದ್ರವವೊಂದು ಕೋಣೆಯನ್ನು ಆವರಿಸುತ್ತದೆ. ಅದರ ತೇವ ಅವಳ ಕೈಗಳನ್ನೂ ಮುಟ್ಟುತ್ತದೆ. ಕಾಮಿನಿ ಅಲ್ಲಿಂದ ಓಡಲೆತ್ನಿಸುತ್ತಾಳೆ. ಆ ಕೈಯ ಹಿಡಿತವನ್ನು ಸಡಲಿಸಿ ತಪ್ಪಿಸಿಕೊಳ್ಳಲು ಪ್ರಯತ್ನಿಸಿದಾಗ ಅದು ಅವಳ ಮಾವನ ಕೈಯೆಂದು ತಿಳಿದು ಬರುತ್ತದೆ. ಆಗ ಜೋರಾಗಿ ಚೀರಿ ಎದ್ದುಬಿಡುತ್ತಾಳೆ. ಸಾಮಾನ್ಯವಾಗಿ ಪುರುಷರನ್ನು ಕಂಡಾಗ ಅವಳಿಗಾಗುವ ಭಯ, ಅವಳ ಮಾವನ ಬಗೆಗಿನ ಗಾಬರಿ ಹಾಗೂ ಅವಳ ಈ ದುಃಸ್ವಪ್ನಕ್ಕಿರುವ ಸಂಬಂಧ

ವನ್ನು ಗುರುತಿಸದೆ ಉಳಿಯುತ್ತಾಳೆ ಕಾಮಿನಿ. ಕೊನೆಗೆ ಅವಳು ಮನೋರೋಗ ಚಿಕಿತ್ಸಕರ ಮೊರೆಗೆ ಹೋಗುತ್ತಾಳೆ. ಕಾಮಿನಿಯನ್ನು ಹಿಪ್ನಾಸಿಸ್ (ಕೃತ್ರಿಮನಿದ್ರೆ)ಗೆ ಒಳಪಡಿಸಿದಾಗ ಐದು ವರ್ಷ ವಯಸ್ಸಿನಲ್ಲಿ ಅವಳ ಮಾವ ಅವಳಿಗೆ ಅಶ್ಲೀಲ/ಲೈಂಗಿಕತೆಗೆ ಸಂಬಂಧಪಟ್ಟ ಚಿತ್ರಗಳನ್ನು ತೋರಿಸಿದ್ದನೆಂದು ಚಿಕಿತ್ಸಕನಿಗೆ ತಿಳಿದುಬರುತ್ತದೆ. ಆತ ಅವಳ ಕೈಗಳನ್ನು ಮಾತ್ರ ಹಿಡಿದಿದ್ದು, ಆಗಾಗ ಸಣ್ಣಗೆ ಚೀರುವುದನ್ನು ಬಿಟ್ಟು ದೈಹಿಕವಾಗಿ ಅವಳನ್ನು ದುರುಪಯೋಗ ಮಾಡಿಕೊಂಡಿರಲಿಲ್ಲ ಎಂಬದೂ ತಿಳಿದು ಬರುತ್ತದೆ. ಹೀಗೆ ಎಲ್ಲೋ ಅಡಗಿಸಿಟ್ಟ ನೆನಪುಗಳು ಈಗ ಕಾಮಿನಿಯನ್ನು ದುಃಸ್ವಪ್ನವಾಗಿ ಕಾಡುತ್ತಿರುತ್ತವೆ. ಹಾಗಾದರೆ ಕಾಮಿನಿ ಲೈಂಗಿಕ ಶೋಷಣೆಗೆ ಒಳಪಟ್ಟಿದ್ದಾಳೆಯೆ ? ಹೌದು.

(ಇ) ಪ್ರೌಢಳಾಗುತ್ತಿರುವ 12 ವರ್ಷದ ಜ್ಯೋತಿಗೆ ಅವಳಿಗಿಂತ 3 ವರ್ಷ ದೊಡ್ಡವನಾದ ಅಣ್ಣನೊಬ್ಬನಿದ್ದಾನೆ. ಸಾಧಾರಣವಾಗಿ ರಾತ್ರಿಯ ಹೊತ್ತು ಅವಳು ನಿದ್ರೆಯಲ್ಲಿದ್ದಾಗ ಅವುದಾದರೊಂದು ನೆಪದಲ್ಲಿ ಆತ ಅವಳ ಬಳಿ ಬಂದು ಅವಳ ಎದೆ, ಹೊಟ್ಟೆ ಹಾಗು ತೊಡೆಯ ಭಾಗಗಳನ್ನು ಮುಟ್ಟುತ್ತಿದ್ದ. ಮಧ್ಯೆ ಎಚ್ಚರವಾದಾಗ ಅವಳ ಕಾಲುಗಳ ಮಧ್ಯೆ ಕೈಯೊಂದನ್ನು ಹಾಗೂ ಅವಳ ಅಣ್ಣ ಪಕ್ಕ ಮಲಗಿರುವುದನ್ನು ನೋಡುತ್ತಿದ್ದಳು. ಜ್ಯೋತಿ ಇದನ್ನು ಪ್ರತಿಭಟಿಸಲು ಆರಂಭಿಸುತ್ತಾಳೆ. ಹಗಲಿನಲ್ಲಿ ಅವಳ ಅಣ್ಣ ಎಲ್ಲರಂತೆ ಮಾಮೂಲಾಗಿ, ಸರಿಯಾಗಿ ವರ್ತಿಸುತ್ತಿದ್ದರಿಂದ ಈ ವಿಷಯವನ್ನು ತನ್ನ ತಂದೆ ತಾಯಿಗೆ ಹೇಳಿದರೆ ಅವಳನ್ನು ನಂಬಲಾರರು ಎಂಬ ಭಯ ಅವಳಗಿತ್ತು. ಒಮ್ಮೊಮ್ಮೆ ತಾನೆ ಎಲ್ಲವನ್ನು ಸುಮ್ಮನೆ ಕಲ್ಪಿಸಿಕೊಳ್ಳುತ್ತಿದ್ದೇನೆಯೇ ಎಂಬ ಅನುಮಾನವೂ ಕಾಡುತ್ತಿತ್ತು. ಅವಳನ್ನು ಮುಟ್ಟುವುದನ್ನು ಬಿಟ್ಟು ಇನ್ನೇನು ಮಾಡದಿದ್ದರೂ, ಅಣ್ಣನ ಈ ವರ್ತನೆ ಬಹಳ ವರ್ಷಗಳವರೆಗೂ ಮುಂದುವರಿದಿತ್ತು. ಅವನ ಸಾಮಿಪ್ಯ ಅವಳಲ್ಲಿ ಭಯತರಿಸುತ್ತಿತ್ತು. ಅವಳನ್ನು ಎದೆಗುಂದಿಸುತ್ತಿತ್ತು. ಕ್ರಮೇಣ ಇದು ಅವಳನ್ನು ವಿಕಾರ ಭಾವನೆಗಳನ್ನು ಹುಡುಗಿಯನ್ನಾಗಿ ಮಾರ್ಪಡಿಸಿತು ಸ್ನಾನ ಮಾಡುವಾಗಲೂ ತನ್ನ ದೇಹವನ್ನು ತಾನೇ ಸ್ಪರ್ಶಿಸಲು ಅಸಹ್ಯ ಪಡುತ್ತ ತನ್ನ ದೇಹವನ್ನು ದ್ವೇಷಿಸತೊಡಗಿದಳು ಜ್ಯೋತಿ. ಜ್ಯೋತಿಯನ್ನು ಲೈಂಗಿಕವಾಗಿ ಶೋಷಿಸಲಾಗಿತ್ತೇ ? ಹೌದು.

(ಈ) ಕೆಲಸದಿಂದ ತಂದೆತಾಯಿ ಬರುವವರೆಗೂ ದೀಪು ತನ್ನ ಗೆಳೆಯನ ಮನೆಯಲ್ಲಿ ಆಡುತ್ತಿರುತ್ತಾನೆ. ದೀಪುವಿನ ಗೆಳೆಯನ ಮನೆಯಲ್ಲಿರುವ ಕೆಲಸದಾಳು ಇವರಿಬ್ಬರನ್ನು ಆಡಲು ಪಾರ್ಕಿಗೆ ಕರೆದೊಯ್ಯುತ್ತಾನೆ, ಅವರಿಬ್ಬರೇ ಹೋಗಿ ಆಡಿ ಬರಲು ಸಣ್ಣವರಾದ್ದರಿಂದ. ದೀಪುವಿಗೆ ಈ ಕೆಲಸದಾಳೆಂದರೆ ಆಗುವುದಿಲ್ಲ. ಕಾರಣ ಸಮಯ ಸಿಕ್ಕಾಗೆಲ್ಲ ಆತ ದೀಪುವನ್ನು ಭದ್ರವಾಗಿ ಹಿಡಿದುಕೊಳ್ಳುವುದು, ಹಾಗೂ ಅವನ ತೊಡೆ ಸಂದನ್ನು ದೀಪುವಿನ ದೇಹಕ್ಕೆ ನೇವರಿಸುವುದು ಮಾಡುತ್ತಿರುತ್ತಾನೆ. ಒಂದು ದಿನ ದೀಪುವಿನ ಕೈಯನ್ನು ಗಟ್ಟಿಯಾಗಿ ಸೆಳೆದುಕೊಂಡು ತನ್ನ ತೊಡೆಯ ಸಂದಿನಲ್ಲಿ ತುರುಕಿಕೊಂಡನು. ಕ್ರಮೇಣ ತೀವಗೊಳ್ಳುವ ನೆಟ್ಟಗೆ ನಿಲ್ಲುವ ಅವನ ಶಿಶ್ನವನ್ನು ದೀಪುವಿಗೆ ಹಿಡಿದುಕೊಳ್ಳಲು ಹೇಳಿದನು. ಹೀಗೆ ಒಮ್ಮೆ ದೀಪು ಅಡಿಗೆ ಮನೆಗೆ ಹೋದಾಗ, ಕದವನ್ನು ಮುಚ್ಚಿ ಆತ ತನ್ನ ಶಿಶ್ನವನ್ನು ಬಾಯಲ್ಲಿರಿಸಿಕೊಳ್ಳುವಂತೆ ದೀಪುವಿಗೆ ಹೇಳಿದ. ಅಷ್ಟೇ ಅಲ್ಲದೆ ಈ ವಿಚಾರವನ್ನು ಯಾರಿಗಾದರೂ ತಿಳಿಸಿದಲ್ಲಿ ಅವನ ತಂದೆ ತಾಯಿಯನ್ನು ಕೊಂದು ಬಿಡುತ್ತೇನೆಂಬ ಬೆದರಿಕೆಯನ್ನು ದೀಪುವಿಗೆ ಹಾಕಿದ. ದೀಪು ಲೈಂಗಿಕವಾಗಿ ಶೋಷಿಸಲ್ಪಟ್ಟಿದ್ದಾನೆಯೇ ? ಹೌದು.

ಈ ಮೇಲ್ಕಂಡ ಪ್ರಸಂಗಗಳು ನಮ್ಮ ಸಮಾಜದಲ್ಲಿ ಸರ್ವೆ ಸಾಮಾನ್ಯವಾಗಿ ಮಕ್ಕಳ ಮೇಲಾಗುವ ಲೈಂಗಿಕ ಶೋಷಣೆಯ ಉದಾಹರಣೆಗಳು. ಲೈಂಗಿಕ ಶೋಷಣೆ ಬರಿ ಮಾತಿನ ಅಥವಾ ದೈಹಿಕ ರೂಪದ್ದಾಗಿರಬಹುದು. ಅಕ್ಕ ಪಕ್ಕದ ಮನೆಯವರು, ಸ್ವಂತ ತಂದೆಯಿಂದಿರು, ಸಂಬಂಧಿಕರು ಹಾಗೂ ಉಪಾಧ್ಯಾಯರು ಶೋಷಕರಾಗಿರುತ್ತಾರೆ. ಸಮಾಜದ ಎಲ್ಲಾ ವರ್ಗಗಳು ಹಾಗೂ ಸ್ಥರಗಳ ಮಕ್ಕಳ ಮೇಲೆ ಲೈಂಗಿಕ ಶೋಷಣೆ, ಅತ್ಯಾಚಾರಗಳು ಪರಿಪಾಠವಾದಂತೆ ನಡೆದು ಬಂದಿದೆ. ಇದಾವುದೂ ಅಪರೂಪದ್ದಲ್ಲ ಹಾಗೂ ಇಲ್ಲಿ ಹೇಳಿರುವ ಎಲ್ಲಾ ಪ್ರಸಂಗಗಳು ಒಂದಲ್ಲ ಒಂದು ರೀತಿಯ ಲೈಂಗಿಕ ಶೋಷಣೆಯೇ ಆಗಿವೆ. ಇದನ್ನು ನಾವು ಗಮನಿಸಬೇಕು.

ಕಾನೂನಿಗನುಸಾರ, 16ಕ್ಕಿಂತ ಕಡಿಮೆ ವಯಸ್ಸಿನ

ಮಗುವಿನ ಮೇಲಾಗುವ ಲೈಂಗಿಕ ಅತ್ಯಾಚಾರವನ್ನು ಮಕ್ಕಳ ಮೇಲಿನ ಲೈಂಗಿಕ ಶೋಷಣೆಯೆಂದು ಅರ್ಥ ಮಾಡಿಕೊಳ್ಳಲಾಗಿದೆ. ಆದರೂ, ಮಗುವಿನ ನಂಬಿಕೆಗೆ ಪಾತ್ರರಾದವರು ಅಥವಾ ಮಗುವಿನ ಮೇಲೆ ಅಧಿಕಾರ ಹೊಂದಿರುವ ಯಾವುದೇ ವ್ಯಕ್ತಿ ಮಗುವನ್ನು ಲೈಂಗಿಕ ಉದ್ದೇಶಗಳಿಗೆ ದೈಹಿಕವಾಗಿ ಹಾಗೂ ಮಾನಸಿಕವಾಗಿ ಬಲವಂತಪಡಿಸಿದಲ್ಲಿ ; ದುರುಪಯೋಗಿಸಿದ್ದಲ್ಲಿ ಅದನ್ನು ಲೈಂಗಿಕ ಶೋಷಣೆ ಎಂದು ನಾವು ಹೇಳಬಹುದು.

**ಮಕ್ಕಳ ಮೇಲಿನ ಲೈಂಗಿಕ ಶೋಷಣೆಯಲ್ಲಿ ಈ ಕೆಳಗಿನವುಗಳು ಒಳಗೊಂಡಿರುತ್ತವೆ :**

* ವಯಸ್ಕರಾದ ಮಹಿಳೆ/ಪುರುಷ ತನ್ನ ಜನನೇಂದ್ರಿಯ ವನ್ನು ಮಗುವಿಗ ಪ್ರದರ್ಶಿಸುವುದು ಅಥವಾ ಮಗುವಿಗೆ ಅಂತೆಯೇ ಮಾಡಲು ಹೇಳುವುದು ಅಥವಾ ಮಗುವಿನ ಜನನೇಂದ್ರಿಯವನ್ನು ಮುಟ್ಟುವುದು.
* ವಯಸ್ಕರು ಲೈಂಗಿಕತೆಗೆ ಸಂಬಂಧಪಟ್ಟ ಚಿತ್ರಗಳನ್ನು, ಪ್ರಸ್ತುತಗಳನ್ನು ಮಗುವಿಗೆ ತೋರಿಸುವುದು.
* ಮಗುವಿನೊಡನೆ, ಬಾಯಿ ಯೋನಿ ಅಥವಾ ಗುದದ್ವಾರದ ಮೂಲಕ ವಯಸ್ಕರು ಸಂಭೋಗಿಸುವುದು.
* ಮಾತಿನ ಅಥವಾ ಬೇರೆ ಯಾವುದೇ ರೀತಿಯಲ್ಲಿ ಮಗುವಿಗೆ ಲೈಂಗಿಕತೆಗೆ ಸಂಬಂಧಪಟ್ಟ ಹಾಗೆ ಸೂಚನೆಗಳನ್ನು ನೀಡುವುದು.
* ಲೈಂಗಿಕ ಕ್ರಿಯೆಯಲ್ಲಿ ತೊಡಗುವಂತೆ ಮಗುವನ್ನು ವಯಸ್ಕರು ಒತ್ತಾಯಿಸುವುದು.

**ಹೇಗೆ ಮತ್ತು ಎಲ್ಲಿ ಇದು ಆಗುತ್ತದೆ :**

ಸಾಮಾನ್ಯ ಇರುವ ತಿಳುವಳಿಕೆಗೆ ವಿರುದ್ಧವಾಗಿರುವ ಸತ್ಯವೇನೆಂದರೆ ಷೋಷಕನು ಮಗುವಿಗೆ ತಿಳಿದವನೆ ಆಗಿರುತ್ತಾನೆ. ಅವನು ಪರಿಹಾರದ ಸ್ನೇಹಿತ, ಒಡ ಹುಟ್ಟಿದವ, ಸಂಬಂಧಿಕ, ಕೆಲಸದಾಳು, ಉಪಾಧ್ಯಾಯ ಆಗಿರಬಹುದು. ಹಾಗಿದ್ದಲ್ಲಿ ಸಾಧಾರಣವಾಗಿ ಶೋಷಕನು ಮಗುವಿನ ಪರಿವಾರಕ್ಕೆ ಚೆನ್ನಾಗಿ ಪರಿಚಿತನೆ ಆಗಿರುತ್ತಾನೆ. ಇದರಲ್ಲಿ ಮಗುವಿನ ತಂದೆ, ಚಿಕ್ಕಪ್ಪ, ಮಾವ, ತಮ್ಮ ಅಣ್ಣಂದಿರೂ ಸೇರುತ್ತಾರೆ.

* ಶೋಷಕನು ಮಗುವಿನೊಡನೆ ನಂಬಿಕೆ ದ್ರೋಹ ಮಾಡಿರುತ್ತಾನೆ.
* ಶೋಷಕನು ತನ್ನ ಅಧಿಕಾರ ಹಾಗೂ ಪದವಿಯ ದುರುಪಯೋಗ ಮಾಡಿಕೊಳ್ಳುತ್ತಾನೆ. ಮಕ್ಕಳು ದೊಡ್ಡವರ ಮಾತನ್ನು ಅಲ್ಲಗಳೆಯರೆಂಬುದು ಆತನಿಗೆ ಗೊತ್ತು.
* ಶೋಷಕ ಮಗುವನ್ನು ಲೈಂಗಿಕ ಕ್ರಿಯೆಯಲ್ಲಿ ತೊಡಗುವಂತೆ ಒತ್ತಾಯಿಸಲು ವಿವಿಧ ತಂತ್ರಗಳನ್ನು ಹಾಗೂ ಬೆದರಿಕೆಗಳನ್ನು ಉಪಯೋಗಿಸುತ್ತಾನೆ.
* ಸರ್ವೇಸಾಮಾನ್ಯವಾಗಿ ಶೋಷಕನ ಮನೆಯಲ್ಲಿ ಅಥವಾ ಮಗುವಿನ ಮನೆಯಲ್ಲಿ ಶೋಷಣೆಯ ಪ್ರಸಂಗ ನಡೆಯುತ್ತದೆ.
* ಶೋಷಕ ಮಗುವನ್ನು ಲೈಂಗಿಕ ಕ್ರಿಯೆಯಲ್ಲಿ ತೊಡಗುವಂತೆ ಒತ್ತಾಯಿಸಲು ವಿವಿಧ ತಂತ್ರಗಳನ್ನು ಹಾಗು ಬೆದರಿಕೆಗಳನ್ನು ಉಪಯೋಗಿಸುತ್ತಾನೆ.
* ಶೋಷಕನ ಮನೆಯಲ್ಲಿ ಅಥವ ಮಗುವಿನ ಮನೆಯಲ್ಲಿ ಶೋಷಣೆಯ ಪ್ರಸಂಗ ನಡೆಯುತ್ತದೆ. ಮಗುವಿಗೆ ಶೋಷಕನ ಪೂರ್ಣ ಪರಿಚಯುವಿರುತ್ತದೆ. ಹಾಗೂ ಶೋಷಕನ ಅಧಿಕಾರ ಹಾಗು ಸ್ಥಾನಗಳು ಮಗುವನ್ನು ಉಪಯೋಗಿಸಿಕೊಳ್ಳಲು ಪೂರಕವಾಗಿರುತ್ತದೆ. ಸಾಮಾನ್ಯವಾಗಿ ದೈಹಿಕ ಹಿಂಸೆ ನಡೆಯುವುದಿಲ್ಲ.
* ಈ ರೀತಿಯ ದುರುಪಯೋಗ ಬಹಳ ದಿನದವರೆಗೂ ಮುಂದುವರೆಯುತ್ತದೆ.
* ಬೆದರಿಕೆ, ಹೆದರಿಸುವಿಕೆಯ ಮೂಲಕ ಮಗುವು ಯಾರ ಮುಂದೆಯೂ ತನ್ನ ದುಷ್ಕರ್ಮದ ಬಗ್ಗೆ ತಿಳಿಸದಿರುವಂತೆ ಶೋಷಕ ನೋಡಿಕೊಳ್ಳುತ್ತಾನೆ. ಮಗುವಿನ ಮೌನಕ್ಕೆ ಇದೊಂದು ಮುಖ್ಯ ಕಾರಣವಾಗಿರಬಹುದು.
* ಶೋಷಕ ಮಗುವಿಗೆ ಅಪರಿಚಿತನಾದಲ್ಲಿ ಮೋಸದಿಂದ ಮಗುವನ್ನು ಆಕರ್ಷಿಸಲು ಯತ್ನಿಸುತ್ತಾನೆ.

## ಶೋಷಕ ಯಾರು ?

* ಶೋಷಕ ಹೆಂಗಸು ಅಥವ ಗಂಡಸಾಗಿರಬಹು ದಾದರೂ, ಗಂಡಸರೆ ಅತ್ಯಧಿಕವಾಗಿ ಶೋಷಕ ರಾಗಿರುತ್ತಾರೆ. ಸಾಮಾನ್ಯವಾಗಿ ಶೋಷಕನಿಗೆ ಮಗು ಪರಿಚಯವಿದ್ದು-ಅಂದರೆ ಪರಿವಾರದ ಸದಸ್ಯನೊ ಅಥವ ಮಗು ನಂಬುವ ವ್ಯಕ್ತಿಯೋ ಆಗಿರುತ್ತಾನೆ.
* ಸಾಧಾರಣವಾಗಿ ಜನ ನಂಬುವಂತೆ ಶೋಷಣೆ ಮಾಡುವವ psychopath (ಬುದ್ಧಿ ಸ್ಥಿಮಿತದಲ್ಲಿ ರದವ) ಆಗಿರುವುದಿಲ್ಲ.

## ಶೋಷಣೆಗೆ ಒಳಗಾಗುವವರು ಯಾರು ?

* ಸಮಾಜದಲ್ಲಿರುವ ಎಲ್ಲಾ ವರ್ಗ, ಸಂಸ್ಕೃತಿ ಹಾಗೂ ಜನಾಂಗಗಳಲ್ಲಿಯೂ ಮಕ್ಕಳನ್ನು ಲೈಂಗಿಕವಾಗಿ ಶೋಷಿಸಲಾಗುತ್ತದೆ.
* ಗಂಡು ಹಾಗೂ ಹೆಣ್ಣು ಮಕ್ಕಳೆರಡನ್ನೂ ಲೈಂಗಿಕ ವಾಗಿ ದುರುಪಯೋಗಿಸಿಕೊಳ್ಳಲಾಗುತ್ತದೆ. ಆದರೂ ಹೆಣ್ಣು ಮಕ್ಕಳು ಅತ್ಯಧಿಕವಾಗಿ ಶೋಷಣೆಗೆ ಒಳ ಪಡುತ್ತಾರೆ ಮತ್ತು ಸಾಧಾರಣವಾಗಿ ಹೆಚ್ಚು ಕಾಲದ ವರೆಗೂ ಶೋಷಿಸಲ್ಪಡುತ್ತಾರೆ.
* ಕಡಿಮೆಯೆಂದರೆ 4ರಲ್ಲಿ 2 ಹುಡುಗಿಯರು, 6ರಲ್ಲಿ ಒಬ್ಬ ಹುಡುಗನು ಲೈಂಗಿಕ ಶೋಷಣೆಗೆ ಬಲಿಯಾಗಿ ರುತ್ತಾರೆ (ಇದನ್ನು 'ಸಾಕ್ಷಿ'ಯವರ ಸಂಶೋಧನೆಯ ಆಧಾರಿತವಾಗಿ ಹೇಳಲಾಗಿದೆ.)

## ಮಕ್ಕಳ ಮೇಲಿನ ಲೈಂಗಿಕ ಶೋಷಣೆಯ ಲಕ್ಷಣಗಳು

* ಶೋಷಣೆಗೆ ಒಳಗಾದ ಮಕ್ಕಳು ತಮಗಾದ ಅನುಭವ ವನ್ನು ಬೇರೆಯವರ ಜೊತೆ ಹೇಳಿ ಹಂಚಿಕೊಳ್ಳಲು ಹೆದರುತ್ತಾರೆ. ಅವರಿಗೆ ಉಂಟಾದ ಭಯ ಹಾಗೂ ನೋವುಗಳನ್ನು ಎದುರಿಸಲು ಹೆಣಗಾಡುವುದೇ ಅವರ ಜೀವನವಾಗುತ್ತದೆ. ಅವರ ಜೊತೆ ಏನು ನಡೆದಿದೆ ಎಂಬುದನ್ನು ಹೇಳಲು ಅವರಲ್ಲಿ ಸಮರ್ಪಕವಾದ ಭಾಷೆ ಇಲ್ಲದಾಗಿ ಹೋಗುತ್ತದೆ. ಹೀಗಾಗಿ ಅವರೇನು ಹೇಳಲು ಯತ್ನಿಸುತ್ತಿದ್ದಾರೆಂಬುದು ದೊಡ್ಡವರಿಗೆ ತಿಳಿಯುವುದಿಲ್ಲ.

ಮಗುವಿನ ನಡವಳಿಕೆಯಲ್ಲಿ ಅಥವಾ ದೇಹದಲ್ಲಿ ಹಠಾತ್ತನೆ ಬದಲಾವಣೆಗಳು ಕಾಣಿಸಿಕೊಂಡಲ್ಲಿ ಎಚ್ಚರ ಗೊಳ್ಳಲು ಈ ಕೆಳಕಂಡ ಯಾವುದೇ ಬದಲಾವಣೆಗಳು ನಿಮ್ಮನ್ನು ಎಚ್ಚರಿಸಲಿ :-

1. ಒಂಟಿತನ ಹಾಗೂ ಯಾರ ಜೊತೆಯೂ ಸೇರ ದಿರುವುದು,
2. ಆತಂಕ, ಬೇಸರ ಹಾಗೂ ಹಿಂಜರಿಕೆ
3. ನಿದ್ರೆಯಲ್ಲಿ ಮೂತ್ರ ಮಾಡಿಕೊಳ್ಳುವುದು
4. ಕೆಲವು ವ್ಯಕ್ತಿಗಳಿಂದ ದೂರವಿರುವುದು
5. ಶಾಲೆಯಲ್ಲಿ ಏಕಾಗ್ರತೆ ಕಳೆದುಕೊಳ್ಳುವುದು ಅಥವಾ ಪರೀಕ್ಷೆಯಲ್ಲಿ ನಾಪಾಸಾಗುವುದು
6. ಇದ್ದಕ್ಕಿದ್ದಂತೆ ಲೈಂಗಿಕ ಪದಗಳನ್ನು ಬಳಸುವುದು
7. ಬೇರೆ ಮಕ್ಕಳ ಲೈಂಗಿಕತೆಯನ್ನು ಶೋಧಿಸುವುದು, ಶೋಷಿಸುವುದು
8. ಗಂಟಲಲ್ಲಿ ಅಥವಾ ಜನನೇಂದ್ರಿಯಗಳಲ್ಲಿ, ಗುದದ್ವಾರಗಳಲ್ಲಿ ಉರಿ ಕಾಣಿಸಿಕೊಳ್ಳುವುದು
9. ಲೈಂಗಿಕವಾಗಿ ಹರಡುವ ಸೋಂಕು ರೋಗಗಳು

## ನಿಮ್ಮ ಮಗುವನ್ನು ಹೇಗೆ ರಕ್ಷಿಸುತ್ತೀರಿ ?

ಸಮಾಜದಲ್ಲಿ ಅತ್ಯಧಿಕವಾಗಿ ಶೋಷಿಸಲ್ಪಡುವವರು ಮಕ್ಕಳೇ ಏಕೆಂದರೆ, ಅವರು ವಯಸ್ಸಿನಲ್ಲಿ ಚಿಕ್ಕವರು ಹಾಗೂ ದೊಡ್ಡವರ ಮೇಲೆ ಅವಲಂಭಿತರು. ಆದುದ ರಿಂದ ಮಕ್ಕಳು ಹೇಗೆ ತಮ್ಮನ್ನು ತಾವೇ ರಕ್ಷಿಸಿಕೊಳ್ಳ ಬೇಕೆಂಬುದನ್ನು ನಾವು ಹೇಳಿಕೊಡಬೇಕಾಗಿದೆ. ನೀವು ಮೊದಲು ಮನೆಯಲ್ಲಿ ಮುಕ್ತವಾದ ವಾತಾವರಣವನ್ನು ಸೃಷ್ಟಿಸಬೇಕು. ಇದರಿಂದ ಮಗುವು ತನಗಾದ ಅನುಭವ ಗಳನ್ನು ನಿಮ್ಮೊಡನೆ ಚರ್ಚಿಸಲು, ಮುಖ್ಯವಾಗಿ ಶೋಷಕ ಮನೆಯವನೆ ಆಗಿರುವಾಗ, ಎಲ್ಲವನ್ನು ಹೇಳಲು ಸಹಾಯ ಮಾಡಿದಂತಾಗುತ್ತದೆ. ಮಗುವಿಗೆ ಲೈಂಗಿಕ ಶೋಷಣೆ ಎಂದರೇನು ಎಂದು ತಿಳಿಸಬೇಕು. ಲೈಂಗಿಕ ಶೋಷಣೆ ಯನ್ನು ತಿಳಿಸಲು ಸರಿಯಾದ ಮಾತುಗಳನ್ನು ಬಳಸಿ, ಸರಳವಾದ ಮಾತುಗಳಲ್ಲಿ ಹೇಳಿ. ಜನನೇಂದ್ರಿಯದ ಬಗ್ಗೆ ತಿಳಿಸಿ. ಬಳಿಕ ಮಗು ಇದರ ಬಗ್ಗೆ ಹಿಂಜರಿಕೆಯಿಲ್ಲದೆ ಮಾತನಾಡಲು ಸಹಕರಿಸಿದಂತಾಗುತ್ತದೆ. ಒಳ್ಳೆಯ ಹಾಗೂ ತಪ್ಪು/ಕೆಟ್ಟ ಸ್ಪರ್ಶವನ್ನು ಗುರುತಿಸಲು ಹೇಳಿ ಕೊಡಿ. ಮಗುವಿಗೆ ತನ್ನ ದೇಹದ ಮೇಲೆ ಹಕ್ಕಿರುವು

ದೆಂದು ಅರ್ಥಮಾಡಿಸಿ. ಮುಖ್ಯವಾಗಿ ಪರಿವಾರದವರಿಗೆ, ಯಾರನ್ನು ಮಗು ಪ್ರೀತಿ, ವಿಶ್ವಾಸಗಳೊಂದಿಗೆ ಕಾಣು ತ್ತದೆಯೋ ಅವರಿಗೂ 'ಬೇಡ'ವೆಂದು ಹೇಳಲು ಅದಕ್ಕೆ ಅಧಿಕಾರವಿದೆ ಎಂದು ಹೇಳಿ. ದೈಹಿಕವಾಗಿ ಪ್ರೀತಿ ತೋರುವ ಮುನ್ನ ಮಗುವಿನ ಅನುಮತಿ ಪಡೆಯುವುದು ಒಳ್ಳೆಯ ಅಭ್ಯಾಸ. ಸಾಮಾನ್ಯವಾಗಿ ಮಗುವನ್ನು ಮುತ್ತಿಡಲು, ತಬ್ಬಿ ಹಿಡಿಯಲು ಒತ್ತಾಯಿಸುವುದನ್ನು ಕಾಣುತ್ತೇವೆ. ಇದೊಂದು ಆಪತ್ತು ತರುವ ಮಾದರಿ ಯಾಗಬಹುದು. ಮಗುವಿಗೆ ತನ್ನ ದೇಹದ ಬಗ್ಗೆ ಸ್ವ-ಇಚ್ಛೆ ಯಂತೆ ವರ್ತಿಸುವ ಅವಕಾಶ ಕೊಡಿ. ಮಗುವಿಗೆ 'ಬೇಡ'ವೆಂದು ಹೇಳಲಾಗದಿದ್ದಾಗ, ಅವನ/ಳ ಪರವಾಗಿ ನೀವು ಧ್ವನಿ ಸೇರಿಸಿ.

**ಪ್ರಾಥಮಿಕ ಮಾರ್ಗದರ್ಶಕಗಳು**

1. ಯಾವುದೇ ವಯಸ್ಕರು ಮಗುವಿಗೆ ಅಸಮಾಧಾನ ವಾಗುವಂತೆ ಮುಟ್ಟಿದಾಗ ಅಥವಾ ತನ್ನ ಗುಪ್ತಾಂಗವನ್ನು ಮುಟ್ಟಲು ಮಗುವಿಗೆ ಹೇಳಿದಾಗ ಬೇಡವೆಂದು ಹಿಂಜರಿಕೆ ಇಲ್ಲದೆ ನಿರಾಕರಿಸಲು ಹೇಳಿಕೊಡಿ.

2. ಮಗುವಿಗೆ ತನ್ನ ದೇಹದ ಅಂಗಾಂಗಗಳ ಹೆಸರನ್ನು ತಿಳಿಸಿ. ಉದಾ: ಎದೆ, ಮೊಲೆ, ಗುದದ್ವಾರ, ಯೋನಿ ಇತ್ಯಾದಿ. ಅವರಿಗಾದ ಅನುಭವವನ್ನು ಹೇಳಿ ಕೊಳ್ಳಲು ಇದು ಅಗತ್ಯವಾಗಿದೆ. ಮಗುವು ತನ್ನ ದೇಹದ ಬಗ್ಗೆ ಅವಮಾನ, ಅಸಹ್ಯ ಪಡದಂತೆ ಮುಕ್ತವಾಗಿರಲು ಸಹಕರಿಸಿ.

3. ಮಗುವು ಎಲ್ಲ ವಿಷಯಗಳ ಬಗ್ಗೆ ಮಾತನಾಡಲು ಸ್ವಾತಂತ್ರ್ಯ ನೀಡಿ. ಯಾವುದೇ ವಯಸ್ಕನು ಮಗುವಿಗೆ ತನ್ನ ಗುಪ್ತಾಂಗಗಳನ್ನು ಪ್ರದರ್ಶಿಸುವುದು, ಮುಟ್ಟಲು ಕೇಳಿಕೊಳ್ಳುವುದು ಮುಂತಾದ್ದೆಲ್ಲಾ ಮಾಡಿ ಅದನ್ನು ಗುಟ್ಟಾಗಿಡುವಂತೆ ಹೇಳುವುದು ತಪ್ಪೆಂದು ತಿಳಿಸಿ. ಆ ವ್ಯಕ್ತಿ ಪರಿವಾರದವನೆ, ಸಂಬಂಧದವನೆ ಅಥವಾ ಪಂಚಯದವನಾಗಿರಬಹುದೆಂಬುದನ್ನು ತಿಳಿಸಿ.

4. ಮಗು ಎಲ್ಲಿ ಹೋಗುತ್ತದೆ, ಯಾರೊಡನೆ ಆಡುತ್ತದೆ ಮತ್ತು ಅದರ ಚಟುವಟಿಕೆಗಳೇನೆಂಬುದನ್ನು ತಿಳಿದುಕೊಳ್ಳಿ.

5. ಮಗುವಿನ ಮಾತುಗಳನ್ನು ನಂಬಿ ಅವಳ/ನ ನಡುವಳಿಕೆಯಲ್ಲಿ ಯಾವುದೇ ಚಿಕ್ಕ ಬದಲಾವಣೆ ಕಂಡು ಬಂದಲ್ಲಿ ಎಚ್ಚರಗೊಳ್ಳಿ. ಅದು ಮಗುವಿನೊಡನೆ ಸಂವಾದಿಸಲು ಸರಿಯಾದ ಕಾಲವಿರಬಹುದು.

6. ಯಾವುದೇ ವಯಸ್ಕರ ಅಥವಾ ಹದಿಹರೆಯ ದವರು ಮಗುವಿನೊಡನೆ ಅಸಾಧಾರಣವಾಗಿ ಪ್ರೀತಿ ತೋರಿಸುತ್ತಿದ್ದಾರೆಯೇ, ಅನಗತ್ಯವಾದ ಅಥವಾ ದುಬಾರಿಯಾದ ಕಾಣಿಕೆಗಳನ್ನು ಕೊಡುತ್ತಿದ್ದಾರೆಯೇ ಗಮನಿಸಿ.

7. ಮಗುವಿಗೆ ಏನಾದರೂ ಅಪಾಯವಾದಾಗ ತಕ್ಷಣ ನಿಮ್ಮನ್ನು ಸಂಪರ್ಕಿಸಲು ಸಾಧ್ಯವಾಗುವಂತಹ ದೂರವಾಣಿ ಸಂಖ್ಯೆಯನ್ನು ಕೊಡಿ.

8. ಯಾವುದೇ ಅಪರಿಚಿತನೊಡನೆ ಗೆಳೆತನ ಬೆಳೆಸ ದಿರಲು ಹೇಳಿ ಅವನ ಮಿಠಾಯಿ, ಚಾಕಲೇಟುಗಳನ್ನು ನಿರಾಕರಿಸುವಂತೆ ತಿಳಿಸಿ.

**ನಿಮ್ಮ ಮಗು ಶೋಷಣೆಗೊಳಗಾಗಿದ್ದರೆ ಏನು ಮಾಡಬೇಕು ?**

ಮಗುವನ್ನು ಒತ್ತಾಯಿಸಿ, ಮೋಸಗೊಳಿಸಿ ಬೆದರಿಸಿ ಲೈಂಗಿಕ ಕ್ರಿಯೆಯಲ್ಲಿ ತೊಡಗುವಂತೆ ಮಾಡುವಲ್ಲಿ ಸಂಪೂರ್ಣ ಹೊಣೆಗಾರಿಕೆ ವಯಸ್ಕರನದ್ದೇ ಆಗಿರುತ್ತದೆ. ಇದು ನಾವು ನೆನಪಿನಲ್ಲಿಡಬೇಕಾದ ಬಹು ಮುಖ್ಯವಾದ ವಿಷಯ. ಅಲ್ಲದೆ ಲೈಂಗಿಕ ಶೋಷಣೆಯ ಬಗ್ಗೆ ಮಗು ವೊಂದು ಸುಳ್ಳು ಹೇಳುವುದು ಅಸಾಧ್ಯ. ನಿಮ್ಮ ಮಗು ಲೈಂಗಿಕ ದುರುಪಯೋಗಕ್ಕೆ ಒಳಗಾಗಿದ್ದಲ್ಲಿ :–

* ಮಗುವು ತನಗಾಗಿದ್ದನ್ನು ಹೇಳಿದಾಗ ಕಂಗಾಲಾಗು ವುದು ಅಥವಾ ಅತಿಯಾದ ಪ್ರತಿಕ್ರಿಯೆ ತೋರಿಸು ವುದು ಮಾಡಬೇಡಿ. ನಿಮ್ಮ ಸಹಾಯ, ಸಹಕಾರದಿಂದ ಮಗು ತನಗಾದ ಕಷ್ಟಗಳಿಂದ ಹೊರಬರಬಲ್ಲದು.
* ಮಗುವನ್ನು ಬೈಯುವುದು, ಟೀಕಿಸುವುದು ಮಾಡ ಬೇಡಿ. ನೀವು ಮಾಡಬಹುದಾದ ತಪ್ಪು ಕೆಲಸವೆಂದರೆ 'ಹಾಗೆಲ್ಲಾ ಮಾಡಬೇಡವೆಂದು ಹೇಳಿದ್ದಲ್ಲ' ಎಂದು ಮಗುವನ್ನು ಗದರಿಸುವುದು. ಮಗುವಿಗೆ ಸಹಾಯ ಮಾಡಲು ಇದು ಅಡ್ಡ ಬರಬಹುದು.
* ಮಗುವಿನಲ್ಲಿ ಅಪರಾಧಿ ಭಾವನೆ ಬರುವಂತಹ ಯಾವುದೇ ಶಬ್ದ ಅಥವಾ ಮಾತುಗಳನ್ನು ಬಳಸಬೇಡಿ

ಮಗುವಿನ ಮೇಲಾಗುವ ಲೈಂಗಿಕ ಶೋಷಣೆಯು ಅತ್ಯಂತ ದೊಡ್ಡ ಏಟೆಂದರೆ ಅದಕ್ಕೆ ಅಂಟಿಸಲ್ಪಟ್ಟ 'ಅಪರಾಧಿ ಭಾವನೆ'. ಮಗುವಿನಲ್ಲಿ ಈ ಭಾವನೆ ಎಂದೆಂದಿಗೂ ಉಳಿಯುತ್ತದೆ. ತನಗಾದ ಅನುಭವ ವನ್ನು ಹೇಳಲು, ನೋವುಗಳಿಂದ ಹೊರಬರಲು ಇದು ತೊಡಕಾಗಬಹುದು.

**ನೆನಪಿರಲಿ** ನಿಮ್ಮ ಮೊದಲ ಪ್ರತಿಕ್ರಿಯೆ ಬಹಳ ಮುಖ್ಯವಾದುದು. ನೀವು ಹೇಗೆ ಪ್ರತಿಕ್ರಿಯಿಸುವಿರಿ ಎಂಬುದರ ಬಗ್ಗೆ ಎಚ್ಚರವಿರಲಿ.

## ನೀವು ಮಾಡಲೇಬೇಕಾದುದು

* ಮಗು ತನ್ನ ಅನುಭವದ ಬಗ್ಗೆ ಮಾತನಾಡಲು ನಿರ್ಧರಿಸಿದಾಗ ಅವಳು/ಅವನನ್ನು ಅನುಮೋದಿಸಿ. ಸಾಮಾನ್ಯವಾಗಿ ತಂದೆ ತಾಯಿಗಳಿಗೆ ಮಕ್ಕಳು ಹೆದರು ತ್ತಾರೆ. ನಿಮ್ಮೊಡನೆ ಎಲ್ಲವನ್ನು ಹೇಳಿದ್ದು ಸರಿಯಾದ ಕೆಲಸವೆಂದು ಮಗುವಿಗೆ ತಿಳಿಸುವುದು ತಂದೆ ತಾಯಿ ಯಾದ ನಿಮ್ಮ ಕರ್ತವ್ಯ.
* ಅವನು/ಅವಳು ಯಾವುದೇ ತಪ್ಪು ಮಾಡಿಲ್ಲವೆಂದು ವಿವರಿಸಿ. ಮಗು ತಾನೆ ಅಪರಾಧಿ ಎಂದು ಅಥವಾ ನಡೆದುದ್ದಕ್ಕೆ ತಾನೇ ಕಾರಣವೆಂದು ಊಹಿಸಿಕೊಳ್ಳುವ ಸಾಧ್ಯತೆ ಇದೆ.
* ಮಗುವನ್ನು ನಂಬಿ. ಲೈಂಗಿಕ ಶೋಷಣೆ ಬಗ್ಗೆ ಮಕ್ಕಳು ಸುಳ್ಳು ಹೇಳಲು ಸಾಧ್ಯವಿಲ್ಲ ಎಂಬುದನ್ನು ನೆನಪಿನಲ್ಲಿಡಬೇಕು.
* ಸಹಾನುಭೂತಿಯಿಂದ, ಸಹಕಾರದಿಂದ ಆಶಾವಾಧಿ ಯಾಗಿ ಮಗುವನ್ನು ಅರ್ಥಮಾಡಿಕೊಳ್ಳಿ. ಇದರಿಂದ ಮಗು ತನ್ನ ಭಾವನೆಗಳನ್ನು ಮತ್ತಷ್ಟು ಮುಕ್ತವಾಗಿ ಮಾತನಾಡಲು ಸಹಾಯವಾಗುತ್ತದೆ.
* ವೈದ್ಯರ ಸಹಾಯದಿಂದ ಮಗುವಿಗೆ ದೈಹಿಕ ಹಾನಿ ಯಾಗಿಲ್ಲವೆಂಬುದನ್ನು ಖಾತರಿ ಪಡಿಸಿಕೊಳ್ಳಿ.
* ಮಗುವಿಗೆ ಚಿಕಿತ್ಸಾ ಸಲಹೆಗಳು ಬೇಕೆ ಎಂಬುದರ ಬಗ್ಗೆ ವಿಚಾರ ಮಾಡಿ. ಏನೂ ನಡೆದಿಲ್ಲವೆಂದು ಆದ ಪ್ರಸಂಗವನ್ನು ಅಲಕ್ಷಿಸಬೇಡಿ. ಏಕೆಂದರೆ ಅದು ನಿಮ್ಮ ಮಗುವಿನ ಮನಸ್ಸಿನ ಮೇಲೆ ಅಳಿಸಲಾಗದ ಗುರುತಾಗಿ ಉಳಿದುಬಿಡಬಹುದು.
* ಶೋಷಕನ ವಿರುದ್ಧ ಮಾತನಾಡಲು, ಅದರಲ್ಲೂ ಆತ ಪರಿವಾರದವನೇ ಆಗಿದ್ದಾಗ ನಿಮಗೆ ಭಾವನಾತ್ಮಕ ವಾಗಿ ಹಾಗೂ ಸಾಮಾಜಿಕವಾಗಿ ಕಷ್ಟಕರವೆನಿಸ ಬಹುದು. ತಪ್ಪು ಸರಿಗಳ ಬಗ್ಗೆ ಮಗು ಅರಿತು ಕೊಳ್ಳಲು ನೀವು ಹೀಗೆ ಮಾಡಬೇಕಾದುದು ಅಗತ್ಯ ವೆಂದು ತಿಳಿಯಿರಿ.
* **ನೆನಪಿರಲಿ** ನಿಮ್ಮ ಮಗು ಸಂಪೂರ್ಣವಾಗಿ ಗುಣ ವಾದರೆ ಮಾತ್ರ ಈ ಅನುಭವದಿಂದ ಹೊರಬರಲು ಸಾಧ್ಯ.

## ಮಕ್ಕಳ ಮೇಲಿನ ಲೈಂಗಿಕ ಶೋಷಣೆಯಿಂದಾಗುವ ಕೆಲವು ಸಂಕೀರ್ಣ ಹಾಗೂ ಧೀರ್ಘಕಾಲದ ಪರಿಣಾಮಗಳು :

### ಕುಂದಿದ ಆತ್ಮಗೌರವ ಹಾಗೂ ಬಲಹೀನತೆಯ ಭಾವನೆ

ಲೈಂಗಿಕವಾಗಿ ಶೋಷಿಸಲಾದ ಮಗು ತಾನೇ ಅದಕ್ಕೆ ಕಾರಣವೆಂದು ತಿಳಿಯುತ್ತ ಬೆಳೆಯುತ್ತದೆ. ಸಾಮಾನ್ಯ ವಾದ ಭಾವನೆಗಳೆಂದರೆ :

* "ಲೈಂಗಿಕವಾಗಿ ನನಗೇನಾಗಿದೆ ಎಂಬುದು ಇತರರಿಗೆ ತಿಳಿದರೆ ಅವರು ನನ್ನೊಡನೆ ಸೇರಲಾರರು".
* "ಬೇರೆಯವರಿಗಿಂತ ನಾನು ಕೀಳು ಏಕೆಂದರೆ ನನಗೆ ಯಾರಿಗೂ ಆಗದ ಅನುಭವಗಳಾಗಿವೆ."
* ಲೈಂಗಿಕ ದುರುಪಯೋಗಕ್ಕೆ 'ಬೇಡ'ವೆಂದು ಹೇಳಲು ಅಸಮರ್ಥವಾದ ಮಗು ತನ್ನ ಆತ್ಮಸ್ಥೈರ್ಯವನ್ನು ಕಳೆದುಕೊಳ್ಳುತ್ತದೆ. ಅದರ ಮುಂದಿನ ಜೀವನದಲ್ಲಿ ಈ ಅಸಹಾಯಕ ಭಾವನೆ ನುಸುಳಿ ಅದರ ನಿರ್ಧಾರ ಶಕ್ತಿಯನ್ನು ಕುಂದಿಸುತ್ತದೆ.
* "ನಾನು 'ಬೇಡ'ವೆಂದು ಹೇಳಬಹುದೆಂಬುದೇ ತಿಳಿದಿರಲಿಲ್ಲ."
* "ನನ್ನ ಸ್ವಂತ ಪರಿವಾರ ನನ್ನ ನೋವಿಗೆ ಕಾರಣ ವಾಗಿದೆ. ಎಲ್ಲರೂ ನನ್ನನ್ನು ಪ್ರೀತಿಗೆ ಅನರ್ಹ ಳೆಂದು ತಿಳಿಯುತ್ತಾರೆ".
* "ಇಂತಹ ಅನುಭವಗಳು ನನಗೇ ಆಗಬೇಕಾದರೆ ನನ್ನಲ್ಲಿ ಏನೋ ತಪ್ಪಿರಬೇಕು. ಒಳ್ಳೆಯ ಹಾಗೂ ಸಾಮಾನ್ಯ ಮಕ್ಕಳಿಗೆ ಹೀಗಾಗಲಾರದು."

* "ನಾನು ಮಾಡಿರುವ ಈ ತಪ್ಪಿಗೆ ದೇವರು ನನ್ನನ್ನು ಶಿಕ್ಷಿಸುತ್ತಾನೆ."

**ಭಾವನಾತ್ಮಕ ತಡೆಗಳು**

ಅನುಭವದ ಬಗ್ಗೆ ಹೇಳಿಕೊಂಡಾಗ ಯಾರೂ ಅವಳು/ನನ್ನು ನಂಬದಿದ್ದರೆ, ಅವನ/ಳ ಅಸಹಾಯ ಕತೆಯನ್ನು ಅರ್ಥಮಾಡಿಕೊಳ್ಳದಿದ್ದರೆ ಮಗು ಎಲ್ಲ ನೋವು, ಕಷ್ಟಗಳನ್ನು ತನ್ನಲ್ಲಿ ಮುಚ್ಚಿಟ್ಟುಕೊಳ್ಳಬಹುದು. ಹೀಗಾಗಿ ಮುಂದಿನ ಜೀವನದಲ್ಲಿ ಯಾವುದೇ ಸಮಸ್ಯೆ ಯನ್ನಾಗಲಿ ಹೇಳಿಕೊಳ್ಳಲು ಕಷ್ಟವಾಗುತ್ತದೆ.

**ಒಂಟಿತನ**

ತಾನು ನಂಬಿದ ವ್ಯಕ್ತಿಯೇ ಮೋಸ ಮಾಡಿದಾಗ ಮಗು ಯಾವ ಸಂಬಂಧದ ಬಗ್ಗೆಯೆ ಆಗಲಿ ಭಯ ತೋರಿಸಬಹುದು. ಯಾವ ವ್ಯಕ್ತಿಯನ್ನಾಗಲಿ ನಂಬಲು ಅಸಾಧ್ಯವೆನಿಸಬಹುದು. ಹೀಗೆ ಒಂಟಿತನದ ಭಾವನೆ ಕಾಡುತ್ತದೆ. 'ನಾನು ಯಾರ ಜೊತೆಯೂ ಕ್ಷೇಮ ದಿಂದಿರಲಾರೆ, ನನ್ನ ಸ್ಥಳ ಗುಡ್ಡ, ನದಿಗಳ ಹತ್ತಿರ' "ನಾನು ಎಷ್ಟು ಒಂಟಿಯೆಂದರೆ ಯಾರು ನನಗೆ ಸಹಾಯ ಮಾಡಲಾರರು, ನನಗೆ ಸಹಾಯ ಬೇಕೆನಿಸುತ್ತದೆ"

**ಗುಣ ಹೊಂದುವ ದಾರಿಯಲ್ಲಿ**

ಮಕ್ಕಳ ಮನಸ್ಸಿನಲ್ಲಿ ಆಳವಾದ, ಬಹಳ ದಿನದವರೆಗು ಉಳಿಯುವಂತಹ ಪರಿಣಾಮಗಳನ್ನು ಲೈಂಗಿಕ ದುರುಪ ಯೋಗ ಉಂಟುಮಾಡುತ್ತದೆ. ಇವುಗಳನ್ನು ಗುಣ ಪಡಿಸಲು ಆದಷ್ಟು ಬೇಗ ಪ್ರಾರಂಭಿಸುವುದು ಒಳ್ಳೆಯದು. ಶೋಷಣೆಗೆ ಒಳಗಾದವರ ಪ್ರತಿಕ್ರಿಯೆ ಗಳು, ಅವರೊಡನೆ ವ್ಯವಹರಿಸಬೇಕಾದ ಕೆಲವು ಸಲಹೆ ಗಳನ್ನು ಇಲ್ಲಿ ಕೊಡಲಾಗಿದೆ.

**ಗೊಂದಲಗೊಳ್ಳುವುದು, ನಿರಾಕರಿಸುವುದು ಹಾಗೂ ಚೈತನ್ಯ ಹೀನವಾಗುವುದು.**

ಅತಿಯಾದ ನೋವು, ಅಸಹಾಯಕತೆಯಿಂದ ನರಳು ತ್ತಿರುವ ಮಗು ಎಲ್ಲವನ್ನು ನಿರಾಕರಿಸಿ, ಏನೂ ನಡೆದಿಲ್ಲ ವೆಂಬಂತೆ ನಂಬಲಾರಂಭಿಸಬಹುದು. ನೋವನ್ನು ಎದುರಿಸದಿರಲು ಭಾವನೆಗಳನ್ನು ಮರಗಟ್ಟಿಸಬಹುದು. ಮಗುವಿಗೆ ಹೀಗಾಗದೆ ನೋವುಗಳನ್ನು ಗುರುತಿಸಿ ಎದುರಿಸಲು ಸಹಾಯ ಮಾಡಿ. ಕಡೇ ಪಕ್ಷ ಕಡಿಮೆ ನೋವು ತರಿಸುವ ದುಃಖ, ದಣಿವು ಮುಂತಾದ ಭಾವನೆಗಳ ನ್ನಾದರೂ ಎದುರಿಸಲು ಪ್ರಾರಂಭಿಸುವಂತೆ ಸಹಾಯ ಮಾಡಿ.

**ಕುಗ್ಗಿಸುವುದು**

ಆದ ನೋವನ್ನು ನಿರಾಕರಿಸದಯೇ ಮಗು ಅನುಭವ ದಿಂದಾಗುವ ಭಾವನೆಗಳನ್ನೆಲ್ಲಾ ಕುಗ್ಗಿಸುವ ಮೂಲಕ ನೋವನ್ನು ದೂರಮಾಡಲು ಪ್ರಯತ್ನಿಸಬಹುದು. ಕಡಿಮೆಯೆಂದು ನಂಬತೊಡಗಬಹುದು. ನೋವಿನ ಪ್ರಮಾಣವನ್ನು ಕುಗ್ಗಿಸಲು ಬಿಡುವುದು ತಪ್ಪು. ಏನಾಗಿದೆಯೋ ಅದು ಸತ್ಯ, ಅದನ್ನು ಒಪ್ಪಿ ಆದ ನೋವನ್ನು ಎದುರಿಸಲೇಬೇಕು.

**ಖಿನ್ನತೆ, ಸ್ವಧ್ವಂಸನೆ, ಒಂಟಿತನ**

ಖಿನ್ನತೆ ಹಾಗೂ ಒಂಟಿತನ ಮಕ್ಕಳ ಲೈಂಗಿಕ ಶೋಷಣೆಯ ಮುಖ್ಯ ಲಕ್ಷಣಗಳು. ಇದು ಸ್ವಧ್ವಂಸಕ್ಕೆ ಕಾರಣವಾಗಬಹುದು. ಮಗುವು ಈ ನೋವುಗಳಿಂದ ಹೊರಬರಲು ಸಹಾಯಮಾಡಿ. ಚಿಕಿತ್ಸಕರ ಮೊರೆಗ ಹೋಗಿ. ಮಗುವಿನ ಆತ್ಮಗೌರವವನ್ನು ಹೆಚ್ಚಿಸುವ ಮೂಲಕ ಅವನ/ಅವಳ ಒಂಟಿತನವನ್ನು, ಅಸಹಾಯ ಕತೆಯನ್ನು ಕಡಿಮೆಗೊಳಿಸಬಹುದು. ಸಂತಸ ತರುವ ಇತರ ಚಟುವಟಿಕೆಗಳಲ್ಲಿ ಮಗು ತೊಡಗುವಂತೆ ಪ್ರೋತ್ಸಾಹಿಸಿ.

**ನಿಯಂತ್ರಣ ತಪ್ಪುವುದು**

ಶೋಷಣೆಯ ಸಮಯದಲ್ಲಿ ಮಗುವಿಗೆ ಪರಿಸ್ಥಿತಿಯ ಮೇಲೆ ಹಿಡಿತ ತಪ್ಪಿ ಅಸಹಾಯಕತೆಯ ಭಾವನೆ ದಟ್ಟ ವಾಗಿರುತ್ತದೆ. ಈ ಭಾವನೆಗಳು ನಂತರ ಮಗುವಿನ ಮುಂದಿನ ಜೀವನದಲ್ಲಿ ಪ್ರವೇಶಿಸಿ ಅವನನ್ನು/ಅವಳನ್ನು ಅವಿಶ್ವಾಸ ಹಾಗೂ ಅಸುರಕ್ಷಿತ ಭಾವನೆಗಳನ್ನುಳ್ಳ ವ್ಯಕ್ತಿ ಯನ್ನಾಗಿ ಮಾರ್ಪಡಿಸುತ್ತದೆ. ದಿನನಿತ್ಯದ ಬದುಕಿನಲ್ಲಿ ಮಗು ತನ್ನ ಆತ್ಮಸ್ಥೈರ್ಯವನ್ನು ಪಡೆದುಕೊಳ್ಳಲು ಸಹಾಯಮಾಡಿ. ಅವನು/ಅವಳು ತಾನೇ ನಿರ್ಧಾರ ಗಳನ್ನು ತೆಗೆದುಕೊಳ್ಳಲು ಪ್ರೋತ್ಸಾಹಿಸಿ. ಮಗುವನ್ನು ಸಾರ್ವಜನಿಕವಾಗಿ ಬೈಯದಿರುವಂತೆ, ಅವಳ/ಅವನ

ಕೆಲಸಗಳನ್ನು ಕೀಳಾಗಿ ಕಾಣದಂತೆ ಎಚ್ಚರದಿಂದ ನಿಗಾವಹಿಸಿ.

**ಸಿಟ್ಟು**

ಶೋಷಣೆಯ ಸಮಯದಲ್ಲಿ ಮಗುವಿಗೆ ಪರಿಸ್ಥಿತಿಯ ಮೇಲಿಗೆ ಹಿಡಿತ ತಪ್ಪಿ, ಅಸಹಾಯಕತೆಯ ಭಾವನೆ ದಟ್ಟವಾಗಿರುತ್ತದ್ದೆ, ಶೋಷಣೆಯ ವಿರುದ್ಧ ಸಿಟ್ಟೇಳುವುದು, ಮಗುವಿನ ನೋವನ್ನು ನಿವಾರಿಸಲು ಮುಖ್ಯವಾದ ಅಸ್ತ್ರವಾಗಿದೆ. ಮಗುವಿಗೆ ಶೋಷಕನೆಡೆಗೆ ಸಿಟ್ಟು ಪ್ರಕಟಗೊಳಿಸುವುದಷ್ಟೇ ಅಲ್ಲದೆ ಸಿಟ್ಟನ್ನು ಅಂಕೆಯಲ್ಲಿಡುವುದಕ್ಕೂ ಸಹಾಯ ಮಾಡಿ. ಸಿಟ್ಟು ತಪ್ಪು ದಾರಿಗೆ ತಿರುಗದೆ ಸರಿಯಾದ ಸುರಕ್ಷಿತವಾದ ರೀತಿಯಲ್ಲಿ ಪ್ರಕಟಗೊಳ್ಳುವುದು ಮುಖ್ಯ. ಸಿಟ್ಟು ನಂತರ ವಿಕಾರ ಭಾವನೆಗಳಾಗಿ ತಿರುಗಿಬಿಡಬಹುದಾದ್ದರಿಂದ ಎಚ್ಚರ ವಹಿಸಬೇಕು.

**ನಾಚಿಕೆ, ಅಪರಾಧ ಭಾವನೆ, ಭಯ**

ಶೋಷಣೆಗೆ ಶೋಷಕನೇ ಕಾರಣವೆಂದು ಹೇಳಿ ಅಪರಾಧಿ ಭಾವನೆಯಿಂದ, ನಾಚಿಕೆಯಿಂದ ಹೊರತರಬೇಕಾದದ್ದು ಮುಖ್ಯವಾದ ಕೆಲಸ. ಆದ ಪ್ರಸಂಗಕ್ಕೆ ನೀನು ಕಾರಣವಲ್ಲ ಎಂದು ಹೇಳಿ ಅವನನ್ನು/ಅವಳನ್ನು ಭಯದಿಂದ ಪಾರುಮಾಡಬೇಕು.

**ನುರುಕಳಿಸುವ ನೆನಪುಗಳು**

ಗುಣಹೊಂದಲು, ಆದ ಅನುಭವಗಳನ್ನು ಮತ್ತೆ ನೆನಪಿಸಿಕೊಳ್ಳುವುದು ಮುಖ್ಯ. ಇದು ಆದ ಕಹಿ ಅನುಭವವನ್ನು ಎದುರಿಸಿ, ನಿವಾರಣೆಯ ಕಡೆ ಹೆಜ್ಜೆ ಹಾಕಲು ಸಹಾಯಕವಾಗುತ್ತದೆ. ನೆನಪಿನ ಮೂಲಕ ಅವನು/ಅವಳು ನಡೆದುಹೋದ ಕಷ್ಟಗಳಿಂದ ತನ್ನ ತಾನೇ ಬಿಡಿಸಿಕೊಳ್ಳುತ್ತಾ ಹೋಗುತ್ತಾನೆ/ತ್ತಾಳೆ. ಹೀಗೆ ಮಗುವಿಗೆ ಈಗ ಎಲ್ಲಾ ಸುರಕ್ಷಿತವಾಗಿದೆ, ಆದದ್ದಲ್ಲಾ ನಡೆದುಹೋದ ಸಂಗತಿ ಎಂದು ಅರ್ಥಮಾಡಿಸಬೇಕು.

**ಕ್ಷಮೆ**

ಕ್ಷಮೆ ತನಗಗಷ್ಟೇ. ಶೋಷಕನನ್ನಾಗಲೀ, ಪರಿವಾರದವರನ್ನಾಗಲೀ, ಇತರರನ್ನಾಗಲೀ ಕ್ಷಮಿಸಬೇಕಾದ್ದಿಲ್ಲ. ಆದರೆ ಶೋಷಿತ ಮಗುವಿಗೆಕ್ಷಮೆ, ಪ್ರೀತಿ ವಿಶ್ವಾಸ, ಮುಖ್ಯವಾಗಿರುತ್ತದೆ.

**ಕಾನೂನು ತಿಳಿದಿರಲಿ**

ಲೈಂಗಿಕವಾಗಿ ಶೋಷಣೆಗೊಳಗಾದ ಮಗುವಿಗೆ ಕಾನೂನಿಂದ ಪರಿಹಾರ ಆಗುವುದಿಲ್ಲ. ಕಾನೂನಿನ ಸೀಮಿತ ದೃಷ್ಟಿ ಹಾಗೂ ಮಗುವಿನ ಸೂಕ್ಷ್ಮತೆಗಳಿಗೆ ಸ್ಪಂದಿಸಲಾರದ ಅದರ ರೀತಿನೀತಿಗಳು ಕಾರಣ.

ಹಾಗಿದ್ದರೂ ನಾವು ಕಾನೂನನ್ನು ಪೂರ್ಣ ನಿರಾಕರಿಸಲು ಅಸಾಧ್ಯವಾದುದರಿಂದ, ಈ ಹೀನ ಅಕ್ರಮದ ಜೊತೆ ಹೋರಾಡಲು ಕಲಿಯಬೇಕು.

**ನೆನಪಿರಲಿ**

* ಮಗುವನ್ನು ಲೈಂಗಿಕ ಉದ್ದೇಶಗಳಿಗಾಗಿ ಉಪಯೋಗಿಸಿಕೊಳ್ಳುವುದು ಅಪರಾಧ.
* ವೈದ್ಯಕೀಯ ತಪಾಸಣೆಗೆ ಒಳಪಡುವ ಹಕ್ಕು ಮಗುವಿಗಿದೆ.
* ಕಾನೂನಿನ ವಿಚಾರಣೆಗೆ ವೈದ್ಯರ ವರದಿ ಮುಖ್ಯವೇನಲ್ಲ, ಮಗುವಿನ ಸಾಕ್ಷಿಯೊಂದೇ ಸಾಕು.
* ಪೋಲೀಸು, ಮ್ಯಾಜಿಸ್ಟ್ರೇಟರ ವಿಚಾರಣೆಗೆ, ಕ್ರಮವಾದ ದಾಖಲಾತಿಗೆ ಹೋಗುವ ಮಗು ತನ್ನ ಜೊತೆ ತಂದೆತಾಯಿ, ಸ್ನೇಹಿತ ಅಥವಾ ಪೋಷಕರನ್ನು ಕರೆದುಕೊಂಡು ಹೋಗಲು ಎಲ್ಲಾ ಹಕ್ಕುಗಳಿವೆ.
* ಮಗುವಿನ ಪರವಾಗಿ ಯಾವುದೇ ವಯಸ್ಕರರು ಪೋಲೀಸರಿಗೆ ದೂರು ಕೊಡಬಹುದು. ಮಗು ಅಲ್ಲಿರಬೇಕಾಗಿಲ್ಲ.
* ಮಗುವು ವಾಸಿಸುವ ಸ್ಥಳದಲ್ಲಿ ಪೋಲೀಸರು ಬಂದು ತಪಾಸಣೆ ಮಾಡುವಂತೆ ಕೇಳಿಕೊಳ್ಳುವ ಹಕ್ಕಿದೆ.
* ಕ್ಯಾಮೆರಾ ಮೂಲಕ ಸಾಕ್ಷಿಯನ್ನು ಹೇಳಲು ಮಗುವಿಗೆ ಹಕ್ಕಿದೆ.
* ಮಗು ತನ್ನ ಹೆಸರನ್ನು ಸಾರ್ವಜನಿಕಗೊಳಿಸದಿರಲು, ಮಾಧ್ಯಮಗಳಲ್ಲಿ ಪ್ರಕಟಗೊಳಿಸದಿರಲು ಹಕ್ಕಿದೆ.

**ನಿಮಗೆ ಎಷ್ಟು ತಿಳಿದಿದೆ ?**

ಮಕ್ಕಳ ಮೇಲಾಗುವ ಲೈಂಗಿಕ ಶೋಷಣೆಯ ಬಗ್ಗೆ ಬರುವ ಹಲವಾರು ಕಟ್ಟುಕತೆ ಹಾಗೂ ಸತ್ಯಗಳನ್ನು ಕೆಳಗೆ

ನೋಡುವಿರಿ. ಇದು ಈ ಸಮಸ್ಯೆಯ ಬಗ್ಗೆ ನಿಮಗೆ ಸರಿಯಾದ ಅರಿವು ನೀಡಲು ಸಹಾಯ ಮಾಡುತ್ತದೆ. ಇಲ್ಲಿರುವ ಪ್ರಶ್ನೆಗಳಿಗೆ ಉತ್ತರಿಸಿದ ಮೇಲೆ ನಿಮ್ಮ ಸ್ನೇಹಿತರೊಂದಿಗೆ ಹಂಚಿಕೊಳ್ಳಿ. ಸರಿಯಾದ ಉತ್ತರಗಳು ಮುಂದೆ ಇವೆ.

**ಮಕ್ಕಳ ಮೇಲಿನ ಲೈಂಗಿಕ ಶೋಷಣೆ**
**ಸುಳ್ಳು / ಸತ್ಯಗಳ ಪಟ್ಟಿ**

**ಸರಿ / ತಪ್ಪು**

1. ಮಕ್ಕಳ ಮೇಲೆ ಲೈಂಗಿಕ ಶೋಷಣೆ ಅಪರೂಪ.
2. ಮಕ್ಕಳ ಮೇಲಿನ ಲೈಂಗಿಕ ಶೋಷಣೆ ಬಡ ಹಾಗೂ ಅಶಿಕ್ಷಿತ ಪರಿವಾರಗಳಲ್ಲಿ ಹೆಚ್ಚು.
3. ಮಕ್ಕಳನ್ನು ಹೊರಗೆ ಆಡಲು ಬಿಡಬಾರದು, ಏಕೆಂದರೆ ಲೈಂಗಿಕ ಶೋಷಣೆ, ಅಕ್ರಮಗಳು ಹೊರಗೆ ಅಂದರೆ, ಸಾರ್ವಜನಿಕ ಪ್ರದೇಶಗಳಲ್ಲಿ, ಆಡುವ ಸ್ಥಳಗಳಲ್ಲಾಗುತ್ತದೆ.
4. ಬಾಲ ಪ್ರೌಢ ಮಕ್ಕಳು, ಬೇಗ ಬುದ್ಧಿವಂತರಾದ ಮಕ್ಕಳು ಮರಳು ಗೊಳಿಸುವ, ಲೈಂಗಿಕವಾಗಿ ಆಕರ್ಷಿಸುವ ನಡವಳಿಕೆ ಹೊಂದಿರುತ್ತಾರೆ.
5. ಸಾಮಾನ್ಯವಾಗಿ ಮಕ್ಕಳು ಲೈಂಗಿಕವಾಗಿ ಶೋಷಿಸಲ್ಪಟ್ಟದ್ದಾರೆಂದು ಭ್ರಮಿಸುತ್ತಾರೆ.
6. ಸಾಧಾರಣವಾಗಿ ಶೋಷಕನು ಬುದ್ಧಿ ಸ್ಥಿಮಿತದಲ್ಲಿರವದನಾಗಿರುತ್ತಾನೆ.
7. ಸಾಮಾನ್ಯವಾಗಿ ತನ್ನ ಮಗು ಲೈಂಗಿಕ ಶೋಷಣೆಗೆ ಬಲಿಯಾಗುತ್ತಿದೆ ಎಂಬುವ ಸತ್ಯ ಮಗುವಿನ ತಾಯಿಗೆ ತಿಳಿದಿರುತ್ತದೆ.
8. ಶೋಷಣೆಯಾಗಿದೆ ಎಂದು ಮಕ್ಕಳು ಹೇಳುವುದರಿಂದ ಒಳ್ಳೆಯದಕ್ಕಿಂತ ಕೆಡಕೇ ಹೆಚ್ಚು.
9. ಶೋಷಿತ ಮಕ್ಕಳು ಎಲ್ಲರಿಂದಲೂ ಅತಿಯಾದ ಸಹಾನುಭೂತಿ ಬಯಸುತ್ತಾರೆ, ಅದನ್ನೇ ದುರುಪಯೋಗ ಪಡಿಸಿಕೊಳ್ಳುತ್ತಾರೆ.
10. ಲೈಂಗಿಕ ಶೋಷಣೆಯಿಂದ ಯಾವುದೇ ಕೆಟ್ಟ ಪರಿಣಾಮಗಳು ಇಲ್ಲದಿರುವುದರಿಂದ ಮಗುವು ತನಗಾದ ಅನುಭವವನ್ನು ಮರೆತು ಬಿಡಲು ಪ್ರೋತ್ಸಾಹಿಸಬೇಕು.
11. ತಮಗೆ ಶೋಷಣೆಯಾಗಿದೆಯೆಂದು ಹೇಳಿ, ನಂತರ ಅವರ ಮಾತನ್ನು ಹಿಂದಕ್ಕೆ ತೆಗೆದುಕೊಳ್ಳುವ ಮಕ್ಕಳು ಕೇವಲ ಎಲ್ಲರ ಲಕ್ಷ್ಯವನ್ನು ತಮ್ಮ ಕಡೆ ಹೊರಳಿಸಲು ಪ್ರಯತ್ನಿಸುತ್ತಿರುತ್ತಾರೆ.
12. ಸಾಮಾನ್ಯವಾಗಿ ಮಕ್ಕಳನ್ನು ಲೈಂಗಿಕವಾಗಿ ದುರುಪಯೋಗಪಡಿಸಿಕೊಳ್ಳುವವರು ನೌಕರರು ಮತ್ತು ಚಾಲಕರೇ.

**ಉತ್ತರಗಳು**

1. ತಪ್ಪು. ಸಮಾಜದಲ್ಲಿ ಮಕ್ಕಳನ್ನು ಅತ್ಯಧಿಕವಾಗಿ ಶೋಷಿಸಲಾಗುತ್ತದೆ. ಏಕೆಂದರೆ ಅವರು ದೊಡ್ಡವರ ಮೇಲೆ ಅವಲಂಬಿತರು.
2. ತಪ್ಪು. ಮಕ್ಕಳ ಮೇಲಿನ ಲೈಂಗಿಕ ಶೋಷಣೆ ಎಲ್ಲಾ ಸ್ಥಳಗಳಲ್ಲೂ ನಡೆಯುತ್ತದೆ. ಏಕೆಂದರೆ ಯಾವುದೇ ಕೌಟುಂಬಿಕ ಹಿನ್ನಲೆಯುಳ್ಳ ಮಕ್ಕಳೂ ಸುಲಭವಾಗಿ ಶೋಷಣೆಗೆ ಬಲಿಯಾಗುತ್ತಾರೆ.
3. ತಪ್ಪು. ಮಕ್ಕಳನ್ನು ಲೈಂಗಿಕವಾಗಿ ಶೋಷಿಸುವುದು ಮನೆಯೊಳಗೆ ಮತ್ತು ಶೋಷಕ ಮನೆಯವನೇ ಅಥವಾ ಪರಿಚಯದವನೇ ಆಗಿರುತ್ತಾನೆ.
4. ತಪ್ಪು. ಲೈಂಗಿಕ ದುರುಪಯೋಗ ಒಂದು ಅಪರಾಧ ಅದನ್ನು ಮಕ್ಕಳೇ ಸ್ವಾಗತಿಸುವುದು ಸಾಧ್ಯವಿಲ್ಲ. 'ಮರಳುಗೊಳಿಸುವುದು' 'ಸ್ವಾಗತಿಸುವುದು' ಇವು ದೊಡ್ಡವರು ಕೊಡುವ ವ್ಯಾಖ್ಯಾನ ಹಾಗೂ ತಪ್ಪು ವಾದಗಳು.
5. ತಪ್ಪು. ಮಕ್ಕಳಿಗೆ ಲೈಂಗಿಕತೆಯ ಬಗ್ಗೆ ತಿಳಿದಿರುವುದು ಅಸಾಧ್ಯ. ಹಾಗಾಗಿ ಬಲಾತ್ಕಾರ ಹಾಗೂ ದುರಪಯೋಗದ ಬಗ್ಗೆ ಕಲ್ಪಿಸಿಕೊಳ್ಳುವುದು ಭ್ರಮಿಸುವುದು ಅಸಾಧ್ಯ.
6. ತಪ್ಪು. ಮಕ್ಕಳ ಮೇಲಿನ ಲೈಂಗಿಕ ಶೋಷಣೆ ಮನೆಗಳಲ್ಲಿ ಆಗುತ್ತದೆ ಎಂಬುದು ನಮಗೆಲ್ಲ ತಿಳಿದ ಸತ್ಯ. ಹಾಗಿದ್ದಲ್ಲಿ ನಮ್ಮ ಮನೆಗಳು ಬುದ್ಧಿ ಸ್ಥಿಮಿತದಲ್ಲಿರದಿರುವವರಿಂದ ತುಂಬಿದೆಯೆ ?

(27ನೇ ಪುಟಕ್ಕೆ ಮುಂದುವರಿದಿದೆ)

(ಕಳೆದ ಸಂಚಿಕೆಯಿಂದ)

# ಚಳುವಳಿ ಎಂದರೇನು?

ಇದುವರೆಗೂ ನಾವು ಮಹಿಳಾ ಚಳುವಳಿಯ ಬಗ್ಗೆ ಚರ್ಚಿಸಿದ್ದೇವೆ. ಪ್ರಸ್ತುತ ಸಂದರ್ಭದಲ್ಲಿ ಕೆಲವರು ಚಳುವಳಿ ಪದವನ್ನು ಉಪಯೋಗಿಸುವುದನ್ನೇ ಪ್ರಶ್ನಿಸುತ್ತಾರೆ. ದೀರ್ಘಾವಧಿಯ ಹೋರಾಟ ಹಾಗೂ ಆಂದೋಲನಗಳನ್ನು ಚಳುವಳಿಯೆಂದು ಕರೆಯಲಾಗಿದೆ. ಪೂರ್ವನಿರ್ಧರಿತ ಅಥವಾ ಹೊಸದಾಗಿ ಹುಟ್ಟಿಕೊಳ್ಳಬಹುದಾದ ತಾತ್ವಿಕ ಬದಲಾವಣೆಯನ್ನು ತರಲು ಪ್ರಯತ್ನಿಸುವ ನಿರಂತರ ಸಮೂಹ ಹೋರಾಟವೇ ಚಳುವಳಿಯೆಂದು ಎಂ. ಎಸ್. ರಾವ್ ಅರ್ಥೈಸುತ್ತಾರೆ. ವಿಶ್ಲೇಷಣಾಕಾರರು ಹಾಗೂ ಕಾರ್ಯಕರ್ತರು, ಪ್ರಸ್ತುತದ ಹೊಸ ಅಲೆಯ ಬಗ್ಗೆ ಅನುಮಾನವನ್ನು ವ್ಯಕ್ತಪಡಿಸುವುದೂ ಉಂಟು. ಒಂದೇ ಧ್ವನಿಯ ಬದಲು ಹಲವಾರು ಧ್ವನಿಗಳು, ಒಂದೇ ರಾಷ್ಟ್ರೀಯ ಒಕ್ಕೂಟದ ಬದಲಾಗಿ, ಚಿಕ್ಕ ಪುಟ್ಟ ಸಂಘಟನೆಗಳು ಒಂದೇ ನಿರ್ದಿಷ್ಟ ತಾತ್ವಿಕತೆ, ಗುರಿಯ ಬದಲಾಗಿ ಹಲವಾರು. ಇದರ ಬಗ್ಗೆಯೂ ಭಿನ್ನಾಭಿಪ್ರಾಯಗಳು ವ್ಯಕ್ತವಾಗಿವೆ. ತಾತ್ವಿಕ ಭಿನ್ನಾಭಿಪ್ರಾಯದಿಂದಾಗಿ ಭಾರತೀಯ ಮಹಿಳಾ ಚಳುವಳಿಯಿಂದ ದೂರವಾಗುವ ಪ್ರಯತ್ನಗಳನ್ನು ಕಾಣಬಹುದು. ಕೇಂದ್ರೀಕರಣ, ನಾಯಕತ್ವ ಮುಂತಾದ ಪರಿಕಲ್ಪನೆಗಳು ಜನಪ್ರಿಯ ವ್ಯಾಖ್ಯಾನಗಳೊಳಗೆ ಅಡಗಿರುವುದನ್ನು ನಾವು ನೋಡಬಹುದು.

ಪ್ರಾರಂಭದಲ್ಲಿ ಭಾರತೀಯ ಮಹಿಳಾ ಚಳುವಳಿ ಸ್ಪಷ್ಟ ರೂಪವಿಲ್ಲದ ವಿವಿಧ ವರ್ಗವನ್ನು ಒಳಗೊಂಡ ಸಮಸ್ಯೆಗಳ ಸುತ್ತ ಕೇಂದ್ರೀಕೃತಗೊಂಡ ಸ್ವಾಯತ್ತ ಚಳುವಳಿಯಾಗಿತ್ತು. ವಿಭಿನ್ನ ತಾತ್ವಿಕ ನೆಲೆಯನ್ನು ಹಾಗೂ ಭಿನ್ನ ತಂತ್ರಗಾರಿಕೆಯನ್ನು ಒಳಗೊಂಡಿತ್ತು. ವಿವಿಧ ರಾಜಕೀಯ ಸಂದರ್ಭದಲ್ಲಿ ಮಹಿಳಾ ಚಳುವಳಿ ಇತರ ಸಂಘ-ಸಂಸ್ಥೆಗಳೊಂದಿಗೆ ಹೊಂದಾಣಿಕೆಯನ್ನು ಮಾಡಿಕೊಂಡರೂ, ತನ್ನ ಸ್ವಂತಿಕೆಯನ್ನು ಉಳಿಸಿಕೊಂಡಿದೆ. ಇದು ಕೇವಲ ಮಹಿಳಾ ಚಳುವಳಿಗೆ ಮಾತ್ರ ಸೀಮಿತವಾಗಿಲ್ಲ, ಸ್ವಾತಂತ್ರ್ಯ ಸಂಗ್ರಾಮದ ಚಳುವಳಿಯಲ್ಲಿಯೂ ಇಂತಹ ವೈರುದ್ಧ್ಯವನ್ನು ಕಾಣಬಹುದು. ಮಾರ್ಕ್ಸ್‌ವಾದ ಹಿಂದೂ-ಮುಸ್ಲಿಂ ಕೋಮುವಾದಗಳನ್ನೊಳಗೊಂಡ ತಾತ್ವಿಕತೆಯಿದ್ದರೂ ಬ್ರಿಟಿಷ್ ಸಾಮ್ರಾಜ್ಯಶಾಹಿಯನ್ನು ಹೊಡೆದೋಡಿಸುವ ಒಂದೇ ಉದ್ದೇಶವನ್ನು ಅದು ಹೊಂದಿತ್ತು. ಹಿಮಾಲಯದ ತಪ್ಪಲಿನಲ್ಲಿ ನಡೆದ ಚಿಪ್ಕೋ ಚಳುವಳಿ, ಸೈಲಂಟ್ ವ್ಯಾಲಿ ಹೋರಾಟ ಎರಡನ್ನೂ ಪರಿಸರ ಚಳುವಳಿಯೆಂದೇ ಗುರುತಿಸಲಾಗಿದೆ.

ಕಾಲಪಥದೊಂದಿಗೆ ಹೃದಯ ಮನಸ್ಸುಗಳಲ್ಲಿ ಚಲಿಸುವ ಕನಸುಗಳೇ ಚಳುವಳಿ. ಸಮಾನತೆಯನ್ನು ಬಿತ್ತುವ, ನ್ಯಾಯಪರತೆಯನ್ನು ಎತ್ತಿ ಹಿಡಿಯುವ ಹರುಷದ ಹೊನಲನ್ನು ಚಲ್ಲುವ ಉತ್ತಮ ಸಮಾಜದ ಪರಿಕಲ್ಪನೆಯೇ ಚಳುವಳಿ. ಭರವಸೆಗಳನ್ನು ಕೊಲ್ಲದ ಶೈಕ್ಷಣಿಕ ವ್ಯಾಖ್ಯಾನಗಳಿಗೆ ಸೀಮಿತಗೊಳ್ಳದ ಇತಿಹಾಸಿಕ ದೃಷ್ಟಾಂತಗಳಿಗೆ ಅಂಟಿಕೊಳ್ಳದ ಚಲನೆಯೇ ಚಳುವಳಿ.

ಪಕ್ಷ ಪರಿಕಲ್ಪಿತ, ಕೇಂದ್ರೀಕೃತ ಚಳುವಳಿಯೇ ಪ್ರಧಾನವಾಗಿರುವ ಈ ಸಂದರ್ಭದಲ್ಲಿ ವಿಕೇಂದ್ರೀಕೃತ ಚಳುವಳಿಗಳನ್ನು ಹರಿದು ಹಂಚಿಹೋಗಿರುವ, ಅಪಾಯಕಾರಿ, ಪ್ರಗತಿ ವಿರೋಧಿ ಎಂದು ನೋಡಲಾಗುತ್ತದೆ. ಭಾರತೀಯ ಮಹಿಳಾ ಚಳುವಳಿ ಒಂದೇ ವಿಚಾರಧಾರೆಯನ್ನು ಹಾಗೂ ಒಂದೇ ಸ್ವರೂಪವನ್ನು ಹೊಂದದೇ ಇರುವುದನ್ನು ಇತಿಹಾಸ ತೋರಿಸುತ್ತದೆ. ಈ ಬಹುಮುಖ ವಿಚಾರಧಾರೆಗಳು ಕೆಲವೊಮ್ಮೆ ಅತಿರೇಕವನ್ನು ತಲುಪಿ ಶೋಷಣೆಯ ಹಾಗೂ ಹೋರಾಟದ ಸಾಮಾನ್ಯ ಅಂಶಗಳನ್ನು ಮರೆತು ಹೋದದ್ದು ಇದೆ.

ಸ್ತ್ರೀಯರು ಸಮಾಜದಲ್ಲಿ ತುಳಿತಕ್ಕೊಳಗಾದವರೆಂಬ ಸಾಮಾನ್ಯ ಅಭಿಪ್ರಾಯದ ನೆಲೆಯಲ್ಲಿ ಮಹಿಳಾ ಸಂಘ-ಸಂಸ್ಥೆಗಳು, ಸಂಘಟನೆಗಳು ಭಾರತೀಯ ಮಹಿಳಾ ಚಳುವಳಿಯ ಭಾಗವಾಗಿದ್ದಾರೆ. ವರ್ಗ ಹಾಗೂ ಸ್ತ್ರೀತ್ವದ ಪರಿಕಲ್ಪನೆ, ಸ್ತ್ರೀ ಶೋಷಣೆಯ ಮೂಲ ಮುಂತಾದವುಗಳ ಬಗ್ಗೆ ಬಿನ್ನಾಭಿಪ್ರಾಯವಿದ್ದರೂ ಐಕ್ಯತೆಗೆ ಅಡ್ಡಿಯಾಗಲಿಲ್ಲ. ಮಹಿಳಾ ಕಲ್ಯಾಣ, ಔದಾರ್ಯ ಮನೋಭಾವದ ಬಲಪಂಥೀಯ ಮಹಿಳಾ ಸಂಸ್ಥೆಗಳು ಮಹಿಳಾ ಸಮಸ್ಯೆಯನ್ನೂ ದುರಾದೃಷ್ಟತೆಯ, ವ್ಯಕ್ತಿತ್ವದ ಕಾರಣದಿಂದ ದಾರಿತಪ್ಪಿದ ನಗರೀಕರಣ, ವಿಭಕ್ತ ಕುಟುಂಬದ

ನೆಲೆಯಲ್ಲಿ ನೋಡುತ್ತಾರೆ. ಕೆಲವು ವರ್ಷದ ಹಿಂದೆ ಭಾರತೀಯ ಜನತಾ ಪರಿಷತ್‌ನ ಮಹಿಳಾ ಘಟಕ ಪೂನಾದಲ್ಲಿ ಪ್ರಚಲಿತಗೊಳ್ಳುತ್ತಿದ್ದ ಪ್ರಗತಿ ಪರ ಸ್ತ್ರೀ ಮುಕ್ತಿ ಪರಿಕಲ್ಪನೆಯ ಬಗ್ಗೆ ಪ್ರತಿಭಟನೆಯುನ್ನು ಹಮ್ಮಿಕೊಂಡಿದ್ದರು. ಸ್ತ್ರೀಯರು ಶೋಷಣೆಗೆ ಒಳಗಾಗಿದ್ದಾರೆ ಎಂಬುದನ್ನು ತಿರಸ್ಕರಿಸುವ ಅವರು, ಸ್ತ್ರೀಯರು ತಾಯಿಯಾಗಿ, ಸ್ತ್ರೀಯಾಗಿ ಸಂತೃಪ್ತಿಯಿಂದ ಇರುಪವರೆಂದು ಪ್ರತಿಪಾದಿಸಿದರು.

ಮಹಿಳಾ ಶೋಷಣೆ ಅನಿವಾರ್ಯವಾದ ಸಮಾಜದ ನೈಜವ್ಯವಸ್ಥೆಯ ಭಾಗವಲ್ಲವಾದುದರಿಂದ್ರ, ಅದನ್ನು ಸುಲಭವಾಗಿ ತೊಡೆದು ಹಾಕಬಹುದು ಎಂದು ಪ್ರಗತಿಪರ ಮಹಿಳಾ ಚಿಂತಕರೆಲ್ಲರೂ ಒಪ್ಪಿಕೊಳ್ಳುತ್ತಾರೆ. ಶೋಷಣೆ ಹಾಗೂ ಬಿಡುಗಡೆಗಳ ನಡುವೆ ಇರುವ ಅಂತರ್ಗತ ಸಂಬಂಧ ಹೋರಾಟವನ್ನು ಸೂಚಿಸುತ್ತವೆ. ಆಧ್ಯತೆಗಳು, ವಿಧಾನಗಳು, ಹೋರಾಟದ ತಂತ್ರಗಳು ಶೋಷಣೆಯ ಬಗೆಗಿರುವ ವಿಭಿನ್ನ ತಾಂತ್ರಿಕ ಪರಿಕಲ್ಪನೆ ಹಾಗೂ ವಿಶ್ಲೇಷಣೆಯನ್ನು ಅವಲಂಬಿಸಿದೆ. ಲೆನಿನ್‌ನ ಪ್ರಕಾರ ಐತಿಹಾಸಿಕವಾಗಿ ಸ್ತ್ರೀಯರ ಅವನತಿ ಖಾಸಗೀ ಆಸ್ತಿ ಹಾಗೂ ವರ್ಗರಚನೆಯಿಂದ ಪ್ರಾರಂಭವಾಗಿರುವುದರಿಂದ ಬಂಡವಾಳಶಾಹಿ ಪದ್ಧತಿಯ ವಿರುದ್ಧ ನಡೆಯುವ ಸಂಘರ್ಷದಲ್ಲಿ ಸ್ತ್ರೀಯರು ಭಾಗವಹಿಸುವರು. ಭಾರತೀಯ ಸಮಾಜದಲ್ಲಿ ಸ್ತ್ರೀಯರಿಗೆ ಉನ್ನತ ಸ್ಥಾನ ಮಾನವಿದ್ದವೆಂದೂ, ಅದು ಮನುಸ್ಮೃತಿಯ ರಚನೆಯಿಂದಾಗಿ ನಾಶವಾಗಿದೆಯೆಂದು ಕೆಲವರು ನಂಬುತ್ತಾರೆ. ಸ್ತ್ರೀಯ ಶೋಷಣೆಗೆ ಕಾರಣವಾದ ಕಾನೂನು ಸಂಪ್ರದಾಯ ರೂಢಿಗಳನ್ನು ಬಲಪಡಿಸಲು ಕಾರಣಕರ್ತರಾದ ಪುರುಷರು ಹಾಗೂ ಇದನ್ನು ಮೈಗೂಡಿಸಿಕೊಂಡ ಮಹಿಳೆಯರು ಬದಲಾವಣೆಯ ಜವಾಬ್ದಾರಿಯನ್ನು ಹೊರಬೇಕಾಗುತ್ತದೆ.

ಬಹುತೇಕ ಸ್ತ್ರೀವಾದಿಗಳು ವರ್ಗರಚನೆಯ ಮೊದಲೇ ಪಿತೃಪ್ರಧಾನತೆ ಪ್ರಾರಂಭವಾಗಿ ಸ್ತ್ರೀಯರ ಶ್ರಮ, ಲೈಂಗಿಕತೆ ಮತ್ತು ಮಾತೃತ್ವದ ಮೇಲೆ ಪುರುಷನು ಹಿಡಿತ ಸಾಧಿಸಿದ್ದಾನೆಂದು ಒಪ್ಪುತ್ತಾರೆ. ಕುಟುಂಬ, ದುಡಿಮೆ ಹಾಗೂ ಸಮಾಜದಲ್ಲಿ ಸ್ತ್ರೀಯರ ಸಶಕ್ತತೆಗೆ ಅವರು ಹೆಚ್ಚು ಒತ್ತು ನೀಡುತ್ತಾರೆ.

ಮಹಿಳಾ ಚಳುವಳಿಯ ಭಾಗವಾಗಿರುವ ಮಹಿಳೆಯರು ಸಮಾಜದಲ್ಲಿ ಲೈಂಗಿಕ ಶ್ರಮವಿಭಜನೆಯಿದೆಯೆಂದು ಭಾವಿಸುತ್ತಾರೆ. ಈ ವಿಭಜನೆಯು ಸಹಜ ಅಥವಾ ಅಸಹಜವಾದು ಎಂಬುದರ ಬಗ್ಗೆ ವಿಫುಲವಾದ ಚರ್ಚೆ ನಡೆದಿದೆ. ಗಂಡಸರು ಮಕ್ಕಳಿಗೆ ಹಾಲುಡಿಸುವುದನ್ನು ನಿರೀಕ್ಷಿಸಲಾಗುತ್ತದೆಯೇ ಎಂದು ಕೆಲವರು ವಾದಿಸಿದರೆ, ಗಂಡಸರು ಮಕ್ಕಳ ಲಾಲನೆ, ಪಾಲನೆ, ಮನೆಗೆಲಸ ಮಾಡಲು ಇರುವ ಅಡ್ಡಿಯಾದರೂ ಏನು ಎಂದು ಕೇಳುತ್ತಾರೆ.

ಆದರೆ ಪುರುಷರು ಆರ್ಥಿಕ ಹಾಗೂ ಭಾವನಾತ್ಮಕ ಲಾಭಗಳನ್ನು ಮನೆಗೆಲಸದಿಂದ ಪಡೆಯುವರೆಂಬುದು ನಿರ್ವಿವಾದವಾದ ಅಂಶವಾಗಿದೆ. ಮನೆಯಲ್ಲಿ ಹಾಗೂ ಸಮಾಜದಲ್ಲಿ ಲೈಂಗಿಕತೆಯ ಆಧಾರವನ್ನು ಒಪ್ಪಿಕೊಂಡಿದ್ದರೂಅದನ್ನುಪ್ರತಿಭಟಿಸುವ ತಂತ್ರಗಳು ವಿಭಿನ್ನವಾಗಿವೆ.

ಸ್ತ್ರೀಯರ ಶೋಷಣೆ, ಸ್ಥಾನಮಾನದಲ್ಲಿ ಬದಲಾವಣೆ ತಕ್ಷಣದಲ್ಲಿ,ಒಂದೇ ವಿಧಾನದ ಮೂಲಕಆಗುವುದಿಲ್ಲವೆಂದು ಮಹಿಳಾ ಸಂಘಟನೆಗಳು ಭಾವಿಸುತ್ತವೆ. ಕ್ರಾಂತಿ ಮತ್ತು ರಾಜಕೀಯ ಬದಲಾವಣೆಗಳಿಂದ್ಧ ರಷ್ಯಾ ಹಾಗೂ ಚೈನಾದಂತಹ ರಾಷ್ಟ್ರದಲ್ಲಿ ಸ್ತ್ರೀಯರು ಸಮಾನತೆಯನ್ನು ಅನುಭವಿಸಿದ್ದರೂ, ಸ್ತ್ರೀಯರಾಗಿ ಶೋಷಿತರಾದುದನ್ನು ಗುರುತಿಸಿಕೊಂಡಿದ್ದಾರೆ. ಒಳ್ಳೆ ಉದ್ದೇಶವನ್ನು ಹೊಂದಿದ ಸರ್ಕಾರಿ ಬದಲಾವಣೆಗಳೂ ಕೂಡ ಕುಟುಂಬ ರಚನೆ, ಸ್ವರೂಪದ ಮೇಲೆ ಯಾವುದೇ ರೀತಿಯ ಬದಲಾವಣೆಯನ್ನು ಉಂಟು ಮಾಡುವುದಿಲ್ಲ. ಚೈನಾದಲ್ಲಿ ಹೆಣ್ಣು ಶಿಶುಗಳ ಹತ್ಯೆ ಆಘಾತಕಾರಿಯಾಗಿದೆ. ಪ್ರಚಾರ ಹಾಗೂ ಪ್ರೇರೇಪಣೆ ಸಮಾಜದಲ್ಲಿನ ಸಂಪ್ರದಾಯ ಪದ್ಧತಿಗಳನ್ನು ಸರಳವಾಗಿ ಬದಲಾಯಿಸಲು ಸಾಧ್ಯವಿಲ್ಲ. ಸತಿಪದ್ಧತಿ, ವರದಕ್ಷಿಣೆಯ ವಿರುದ್ಧ ವ್ಯಾಪಕವಾದ ಪ್ರತಿಭಟನೆ ನಡೆದರೂ, ಕಾನೂನಿನಲ್ಲಿ ಹಲವಾರು ಬದಲಾವಣೆಯನ್ನು ತಂದಿದ್ದರೂ ಈ ಪದ್ಧತಿಯನ್ನು ಬಿಡಲು ಜನಸಾಮಾನ್ಯರು ತಯಾರಿಲ್ಲ.

ಸಮಾಜದ ಮೇಲೆ ಪರಿಣಾಮಕಾರಿ ಪ್ರಭಾವವನ್ನು ಬೀರಬೇಕಾದರೆ ಸಂಖ್ಯೆಯಲ್ಲಿ ಹಾಗೂ ಹೋರಾಟದ ಪ್ರವೃತ್ತಿಯಲ್ಲಿ ಹೆಚ್ಚು ಪ್ರಭಲವಾಗಬೇಕಾಗಿದೆಯೆಂದು ಚಳುವಳಿಯಲ್ಲಿ ತೊಡಗಿಸಿಕೊಂಡ ಕಾರ್ಯಕರ್ತರು ಭಾವಿಸುತ್ತಾರೆ. ಮಹಿಳೆಯರ ಬಗ್ಗೆಯಿರುವ ಧೋರಣೆ

ಗಳು ಬದಲಾಗಬೇಕಾದರೆ ಮಹಿಳಾ ಸಂಘಟನೆಗಳ ನಡುವೆ ಸಹಕಾರ ಮನೋಭಾವನೆ ಹೆಚ್ಚಿ ಸಂಘಟಿತರಾಗ ಬೇಕಾದುದು ಅತ್ಯಗತ್ಯವಾಗಿದೆ. ಮಹಿಳಾ ಶೋಷಣೆಯ ಸಾಮಾನ್ಯ ಅಂಶಗಳು, ಸ್ಥಾನಮಾನ, ಸ್ತ್ರೀಯರ ಕೀಳು ದರ್ಜೆ ಮುಂತಾದವು ಸ್ತ್ರೀ ಸಂಘಟನೆಗಳನ್ನು ಒಟ್ಟಿಗೆ ತರುವಲ್ಲಿ ಪೂರಕವಾದ ಅಂಶಗಳು. ಅತ್ಯಾಚಾರದ ವಿರುದ್ಧ ರಾಷ್ಟ್ರೀಯ ಮಟ್ಟದಲ್ಲಿ ನಡೆದ ಸಂಘಟಿತ ಹೋರಾಟ ಸಹಕಾರ ಹಾಗೂ ಐಕ್ಯತೆಗೆ ಉತ್ತಮ ನಿದರ್ಶನ.

ಭಾರತೀಯ ಮಹಿಳಾ ಚಳುವಳಿಯ ಐಕ್ಯತೆಯನ್ನು ಕಾಪಾಡುವ ಶೋಷಣೆ ಮತ್ತು ಹೋರಾಟದ ಬಂಧನದ ಎಳೆಗಳು ಸದಾ ಒತ್ತಡದಲ್ಲಿ ಇರುತ್ತದೆ. ಭಾರತದ ವೈಶಾಲ್ಯತೆ, ಭೌಗೋಳಿಕತೆ, ಸಾಮಾಜಿಕ ಹಾಗೂ ಪ್ರಾದೇಶಿಕ ವಿಶಿಷ್ಟತೆ, ವರ್ಗ ವ್ಯತ್ಯಾಸಗಳು, ಸ್ಥಳೀಯ ಸಮಸ್ಯೆಗಳು ಈ ಒತ್ತಡಕ್ಕೆ ಕಾರಣವಾಗಿದೆ. ಮಹಿಳೆ ಮತ್ತು ಮಹಿಳೆ, ಮಹಿಳೆ ಮತ್ತು ಸಂಘಟನೆಗಳ ನಡುವೆ ಸಂಪರ್ಕದ ಕೊರತೆ ಕಂಡುಬರುತ್ತಿದೆ. ಸಂಘಟನೆ ಗಳನ್ನು ಚೇತೋಹಾರಿ ಮಾಡಿದ 'ವಿಕೇಂದ್ರೀಕರಣ ಪರಿಕಲ್ಪನೆ'ಯೇ ಪ್ರಯೋಗ ಶೀಲರಾದ ವ್ಯಕ್ತಿ ಹಾಗೂ ಗುಂಪುಗಳ ಅದರ ಬಲಿಪಶುಗಳಾಗಿಬಿಡಬಹುದು. ಹರಿದು ಹಂಚಿಹೋಗುವುದು ವಿಕೇಂದ್ರೀಕರಣ ಪರಿಕಲ್ಪನೆಯ ಇನ್ನೊಂದು ಮುಖ. ರಾಷ್ಟ್ರೀಯ ಒಕ್ಕೂಟ, ಅಥವಾ ರಾಷ್ಟ್ರೀಯ ದನಿ ಇಲ್ಲವೆಂದ ಮಾತ್ರಕ್ಕೆ ಧ್ವನಿಯೇ ಇಲ್ಲವೆಂಬ ಅರ್ಥವಲ್ಲ.

ಮಹಿಳಾ ಚಳುವಳಿಯಲ್ಲಿನ ಸಂಪರ್ಕದ ಸ್ವರೂಪ ವೇನು ? ಇಲ್ಲಿ ಸಂಪರ್ಕವನ್ನು ಕಾರ್ಯಕರ್ತರು ಹಾಗೂ ಸಂಘಟನೆಗಳಿಗೆ ಸೀಮಿತಗೊಳಿಸಲಾಗಿದೆ. ವರ್ಗ, ಜಾತಿ, ಅನಕ್ಷರತೆ, ಮುಂತಾದವುಗಳ ನಡುವಿರುವ ಸಂಪರ್ಕ ಪ್ರತ್ಯೇಕವಾದುದು ಹಾಗೂ ಸಂಕೀರ್ಣವಾದುದು. ಮಹಿಳಾ ಚಳುವಳಿಯ ಉತ್ತುಂಗ ಸ್ಥಿತಿಯನ್ನು 81ರಿಂದ 90ರವರೆಗೆ ಕಾಣಬಹುದು. ರಾಷ್ಟ್ರೀಯ ಮಹಿಳಾ ಸಮಾವೇಶ, ಮಹಿಳಾ ಅಧ್ಯಯನ ಸಮಾವೇಶ, ಶೈಕ್ಷಣಿಕ ಸಮಾವೇಶ ಮುಂತಾದವುಗಳಲ್ಲಿ ಕಾಣಬಹುದು. ಮಹಿಳಾ ಸಂಘಟನೆಗಳ ಸಂಖ್ಯೆ ಹೆಚ್ಚಿರುವುದರಿಂದ ವೈಯಕ್ತಿಕ ಮಟ್ಟದ ಸಂಪರ್ಕ ಅಸಾಧ್ಯವಾದುದು. ಪತ್ರ ಗಳನ್ನು ಬರೆದರೂ ಉತ್ತರಿಸುವವರು ಕಡಿಮೆ. ಪತ್ರಿಕೆ ಗಳು, ಲೇಖನಗಳು ವಿನಿಮಯವಾದದ್ದು ತುಂಬಾ ಕಡಿಮೆ.

ವಿಚಾರಧಾರೆಗಳು, ಅಭಿಪ್ರಾಯಗಳು ಚರ್ಚಾರ್ಹ ಸಂಗತಿಗಳು ಅಪರೂಪವಾಗಿ ಚರ್ಚೆಗೆ ಒಳಗಾಗಿವೆ. ಮಾನುಷಿ ಪತ್ರಿಕೆಯೊಂದನ್ನು ಬಿಟ್ಟರೆ ರಾಷ್ಟ್ರೀಯ ಮಟ್ಟ ದಲ್ಲಿ ಬೇರೆ ಪತ್ರಿಕೆಗಳಿಲ್ಲ. ಸಂಪರ್ಕದ ಕೊರತೆಯ ಪರಿಣಾಮವಾಗಿ ಸಂಘಟನೆಗಳಿಗೆ ಬರುವ ಹೊಸ ಸದಸ್ಯ ರಿಗೆ, ಹೊಸ ಸಂಘಟನೆಗಳಿಗೆ ಚರಿತ್ರೆಯ ಬಗ್ಗೆ, ಗುಂಪಿನ ಅನುಭವ, ಹೊಳವು, ಸಮಸ್ಯೆಗಳ ಬಗ್ಗೆ ಅರಿವಿರುವುದಿಲ್ಲ. ಪಕ್ಷದ ಕಾರ್ಯಕರ್ತರು, ಅಧ್ಯಯನ, ಪ್ರವಾಸ ಮುಂತಾದವುಗಳಿಗೆ ಒಳಗಾಗುವ ಹಾಗೆ, ಮಹಿಳಾ ಚಳುವಳಿಯ ಕಾರ್ಯಕರ್ತರಿಗೆ ಅಧ್ಯಯನದ ಅವಕಾಶ ವಿಲ್ಲ. ಹಳೆಯ 'ನಾಯಕಿಯರು' ಇತರರೊಂದಿಗೆ ತಮ್ಮ ಅನುಭವಗಳನ್ನು ಚಳುವಳಿಯ ಬೆಳವಣಿಗೆಗೆ ಪೂರಕ ವಾಗುವ ಮಾಹಿತಿಯಾಗಿ ಹಂಚಿಕೊಳ್ಳುವುದಕ್ಕಿಂತ ನೆನಪಾಗಿ ಹಂಚಿಕೊಳ್ಳುತ್ತಾರೆ. ಕೆಲವು ತರಬೇತು ದಾರರು, ಮತ್ತು ಸಂಪನ್ಮೂಲ ವ್ಯಕ್ತಿಗಳು ಮಾಹಿತಿ ಯನ್ನು ಸುವ್ಯವಸ್ಥಿತಗೊಳಿಸುವುದರ ಜೊತೆಗೆ ಸಂಪರ್ಕ ವಿಧಾನವನ್ನು ರೂಪಿಸಿದ್ದಾರೆ. ಅಂಕಿ, ಅಂಶ, ಪ್ರಯೋಗಶೀಲತೆ, ತಂತ್ರಗಾರಿಕೆ ಮುಂತಾದ ವಿಷಯ ಗಳಿಗೆ ಸಂಬಂಧ ಪಟ್ಟಂತೆ ಮಾಹಿತಿಯ ಕೊರತೆಯನ್ನು ಕಾಣಬಹುದು.

ಈ ಸಂಪರ್ಕ ಸಮಸ್ಯೆಯನ್ನು ನಾವು ಕೇವಲ ದೂರ, ಸಂಪನ್ಮೂಲ, ಅಥವಾ ಭಾರತದಲ್ಲಿ ಕಂಡುಬರುವ 'ಆಡುಮಾತಿನ' ಸಂಪ್ರದಾಯಕ್ಕೆ ಸೀಮಿತಗೊಳಿಸ ಬಹುದೇ ? ಪ್ರಸ್ತುತದಲ್ಲಿ ಅಸ್ತಿತ್ವದಲ್ಲಿ ಒಂದು ವಾದ, ಅದೇ ಸರಿಯಾದುದೆಂಬ ದುರಹಂಕಾರ, ಚಟುವಟಿಕೆ ಗಳು ವಿಚಾರಧಾರೆಗಳ ದ್ವೀಪವೊಂದನ್ನು ಸೃಷ್ಟಿಸಿದೆ. ಜೊತೆಗೆ ಅಪನಂಬಿಕೆ, ಅನುಮಾನಗಳಿಗೆ ಎಡೆಮಾಡಿ ಕೊಟ್ಟಿದೆ.

ಅತ್ಯಾಚಾರದ ವಿರುದ್ಧ ನಡೆದ ಚಳುವಳಿಗಳು ನಮಗೆ ನೆನಪಾಗುತ್ತದೆ. ಮಾರ್ಕ್ಸ್‌ವಾದಿ ಮತ್ತು ಲೆನಿನ್‌ವಾದಿ ಸಂಘಟನೆಗಳು ಈ ಚಳುವಳಿಯಲ್ಲಿ ತೊಡಗಿದ ಎಲ್ಲರನ್ನು ರ್‍ಯಾಡಿಕಲ್ ಫೆಮಿನಿಸ್ಟ್, ಪುರುಷವಿರೋಧಿಯೆಂಬ ಹಣೆ ಪಟ್ಟಿಯನ್ನು ಅಂಟಿಸಿತು. ಪೋರಂನ ವಿಚಾರಧಾರೆ ಮತ್ತು ರ್‍ಯಾಡಿಕಲ್ ಫೆಮಿನಿಸ್ಟರ ನಡುವೆ ಇರುವ ಮೂಲ

ಭೂತವಾದ ತಾತ್ವಿಕ ವ್ಯತ್ಯಾಸಗಳನ್ನು ವಿವರವಾಗಿ ಚರ್ಚಿಸಿದರೂ ಅವರನ್ನು ಒಪ್ಪಿಸಲು ಸಾಧ್ಯವಾಗಲಿಲ್ಲ. ಕೆಲವು ಬಾರಿ ಅವರು ಕೆಲವು ವಿಶಿಷ್ಟ ಸಮಸ್ಯೆಗಳ ಸುತ್ತ ಚಟುವಟಿಕೆಗಳಿಗೆ ತಮ್ಮ ನಾಯಕತ್ವ ನೀಡುವುದನ್ನು ಬಿಟ್ಟು ಸಹಕಾರ ನೀಡಲು ಬಂದಾಗ ನಾವು ಅವರನ್ನು ಅನುಮಾನದಿಂದ ನೋಡಿ ದೂರ ಉಳಿದದ್ದು ಉಂಟು.

ತಾತ್ವಿಕತೆಯನ್ನು ಮತ್ತು ಶೈಕ್ಷಣಿಕ ಅಧ್ಯಯನಗಳನ್ನು ಮಹಿಳಾ ಚಳುವಳಿ ಅನುಮಾನದಿಂದಲೇ ನೋಡುತ್ತಾ ಬಂದಿದೆ. ಇದು ಸಮರ್ಥನೀಯವೂ ಆಗಿದೆ. ಇವು ಚಳುವಳಿಯ ಪ್ರಾರಂಭ ವಿಕಾಸದ ಹಾದಿಯಿಂದ ದೂರ ಇದ್ದವು. ಆದರೆ ಒಂದು ಹಂತದಲ್ಲಿ ಶೈಕ್ಷಣಿಕ ಅಧ್ಯಯನಗಳು, ವೈಯಕ್ತಿಕ ಅನುಭವಗಳು, ಹೋರಾಟದ ವಿವರ ಮುಂತಾದವುಗಳು ಹೆಚ್ಚುತ್ತಾ ಬಂದವು. ಭಾವನೆ, ಹಾಗೂ ಸಿಟ್ಟನ್ನು ಒಳಗೊಂಡ ಚೇತೋಹಾರಿಯಾದ ಈ ವೈಯಕ್ತಿಕ ಬರಹಗಳು ಮಾಹಿತಿಯ ಹಾಗೂ ಚಟುವಟಿಕೆಗಳ ಅನುಭವದ ಗಣಿಯೇ ಆಗಿವೆ. ಇವು ತಾತ್ವಿಕ ವಿಚಾರಧಾರೆ, ರಾಜಕೀಯ ಪ್ರತಿಪಾದನೆ, ತಂತ್ರಗಳಿಗೆ ಸವಾಲೆಸೆಯುವುದರ ಜೊತೆಗೆ ಚಳುವಳಿಯ ಪರವಾದ ಅಲೆಯನ್ನು ಸೃಷ್ಟಿಸಿದವು. ಇನ್ನೊಂದು ಹಂತದಲ್ಲಿ ಇದು ಪ್ರಾದೇಶಿಕತೆ, ಹಾಗೂ ವ್ಯಕ್ತಿತ್ವದ ವಿಶಿಷ್ಟತೆಗೆ ಚಾಲನೆಯನ್ನು ನೀಡಿದ್ದರೂ ಪರಿಕಲ್ಪನೆಗಳಾಗಿ ಪರಿವರ್ತಿತವಾಗುವ ಸಾಧ್ಯತೆಯನ್ನು ಕಳೆದುಕೊಂಡಿತು. ತಾತ್ವಿಕ ವಿಕಸನದ ಹಾದಿಯು ದುರ್ಬಲವಾಯಿತು. ತನಗೆ ಮಾತ್ರ ಸೀಮಿತವಾದ ಭಾವನಾತ್ಮಕ ಹಾಗೂ ಚೇತೋಹಾರಿಯಾದ ಚಟುವಟಿಕೆಗಳನ್ನು ಪ್ರೋತ್ಸಾಹಿಸಿತು. ಅತ್ಯಾಚಾರದ ಪ್ರತಿಭಟನೆಯ ಬಗ್ಗೆ ಇರುವ ದಾಖಲೆ ತುಂಬಾ ಕಡಿಮೆ ? ಏಕೆ ? ನಮಗೆ ಸ್ತ್ರೀಯರ ಚರಿತ್ರೆಯ ಬಗ್ಗೆ ಅರಿವಿದ್ದಿದ್ದರೆ ಸದಾ ನಾವು "ಮಹಿಳಾ ಚಳುವಳಿ ನಡೆಯುತ್ತಿದೆಯೇ ?" ಎಂದು ಕೇಳುತ್ತಿರುತ್ತೇವೆಯೆ ?

ಎಲ್ಲಾ ಮಹಿಳಾ ಸಂಘಟನೆಗಳು ಪ್ರಯತ್ನಿಸಿದರೆ ಸಂಪರ್ಕದ ಕೊರತೆಯನ್ನು ನೀಗಿಸಬಹುದು. ಇತ್ತೀಚೆಗೆ ಗುಂಪು ಗುಂಪುಗಳ ನಡುವೆ ಸಹಕಾರ ಮನೋಭಾವನೆ ಮೂಡಿ ಬರುತ್ತಿರುವುದನ್ನು ಕಾಣಬಹುದು. ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ತಮಗಾಗಿ ಇಲ್ಲವೆ ಸಂಘಟನೆಗಳಿಗಾಗಿ, ಸಭೆ ಸಮಾರಂಭಗಳಿಗಾಗಿ ವಿಶ್ಲೇಷಣಾರ್ಥಕವಾಗಿ ಬರೆಯುತ್ತಿದ್ದಾರೆ. ದೆಹಲಿಯ ಕಾಳಿ ಪ್ರೆಸ್ ಪುಸ್ತಕಗಳನ್ನು ಪ್ರಕಟಿಸುತ್ತದೆ. ಕಿರು ಹೊತ್ತಿಗೆಗಳು, ಪತ್ರಿಕೆಗಳನ್ನು ಸಂಗ್ರಹಿಸುವ ಗ್ರಂಥಾಲಯಗಳು ಇವೆ. ಮಹಿಳಾ ಗುಂಪುಗಳು ಇತರ ಗುಂಪಿನ ಕಾರ್ಯಕರ್ತರನ್ನು ಕರೆದು ಅನುಭವಗಳನ್ನು ಹಂಚಿಕೊಳ್ಳುತ್ತಿದ್ದಾರೆ. ಇಂತಹ ಪ್ರಯತ್ನಗಳು ಸಂಘಟನೆಗಳ ನಡುವಿರುವ ಗೋಡೆಯನ್ನು ಕೆಡುವಿ ಹಾಕಬಲ್ಲವು.

ಈ ಚಳುವಳಿಯ ವಿವಿಧ ಘಟ್ಟಗಳ ಪ್ರಕ್ರಿಯೆಯನ್ನು ದಾಖಲಿಸುವುದು ಭಾರತೀಯ ಮಹಿಳಾ ಚಳುವಳಿಗೆ ನಾವು ನೀಡುವ ಕೊಡುಗೆಯಾಗಿದೆ. ಈ ದಾಖಲೆ ಹೊಸ ಸದಸ್ಯರಿಗೆ ಮಾಹಿತಿ, ವಿವರಗಳನ್ನು ನೀಡಿದರೆ ಹಳೆಯ ಸದಸ್ಯರಿಗೆ ವಿಮರ್ಶಾತ್ಮಕ ಸಿಂಹಾವಲೋಕನ ಮಾಡಲು ಪೂರಕವಾಗುತ್ತದೆಯೆಂಬ ಭರವಸೆ ನಮಗಿದೆ.

(ಮುಂದುವರೆಯುತ್ತದೆ)

# ಹಮೀದಾಳ ದುಸ್ವಪ್ನ

## ಪೋಲೀಸ್ ಅತ್ಯಾಚಾರಿಗಳನ್ನು ರಕ್ಷಿಸಲು ನ್ಯಾಯಾಲಯುಗಳು ಹಿಂದಕ್ಕೆ ಬಾಗುತ್ತವೆ.

ನ್ಯಾಯಕ್ಕಾಗಿ ಬದ್ಧರಾಗಿರುವವರು, ಹೋರಾಡ ಬಯುಸುವವರು–ವ್ಯವಸ್ಥೆಯ ಭಾಗವಾದ ಕಾನೂನು ಪಾಲಕರನ್ನು ಶಿಕ್ಷೆಗೆ ಒಳಪಡಿಸುವಂತಹ ಸಾಹಸಕ್ಕೇನಾದರೂ ತೊಡಗಿಸಿಕೊಂಡರೆ ಅಪಾಯ ಎದುರಿಸುವಂತಹ ಪರಿಸ್ಥಿತಿ ಯಾರಿಗಾದರೂ ಎದುರಾಗಬಹುದು ಎಂಬ ಕ್ರೂರ ವಾಸ್ತವತೆಗೆ ಇತ್ತೀಚಿನ ದಿನಗಳಲ್ಲಿ ಸುದ್ದಿಯಾದ ಬಾಂಗ್ಲಾ ದೇಶದ ಹತ್ತು ವರ್ಷದ ಹಮೀದಾಳ (ಆಕೆಯ ನಿಜವಾದ ಹೆಸರಲ್ಲ) ಅತ್ಯಾಚಾರದ ಪ್ರಕರಣ ಒಂದು ಉದಾಹರಣೆಯಾಗಿದೆ. ಮಾನುಷಿಯಲ್ಲಿ ಪ್ರಕಟವಾಧ ಈ ಕೇಸನ್ನು ದಾಖಲಿಸಿರುವವರು ದೀಪಾ ಅಗರ್‌ವಾಲ್. ಈ ಕೇಸನ್ನು ಕೋರ್ಟಿನಲ್ಲಿ ನಡೆಸುತ್ತಿರುವ ರೀತಿಯನ್ನು ವಿರೋಧಿಸಿ ಈ ಕೆಳಕಂಡವರಿಗೆ ಬರೆಯುವಂತೆ ಮಾನುಷಿಯವರು ಓದುಗರಿಗೆ ಕರೆಯಿತ್ತಿದ್ದಾರೆ.

ವಿಳಾಸ : Additional Sessions Judge B. N. Chaturvedi, Room 2. Karkarduma District Court, Shahdara, Delhi

ಹಮೀದಾಳ ಮೇಲೆ ಹಲವಾರು ಬಾರಿ ನಡೆದ ಅತ್ಯಾಚಾರ ಯಾವುದೇ ಸಂಶಯುಗಳಿಲ್ಲದೇ ಧೃಡಪಡಲ್ಪಟ್ಟಿದೆ. ಇದು ಧೃಡ ಪಡಿಸಲ್ಪಟ್ಟದ್ದು ಕೇವಲ ಸಾಕ್ಷಿ, ಪ್ರಮಾಣಗಳಿಂದ ಮಾತ್ರವಲ್ಲ, ವೈದ್ಯಕೀಯ ತಪಾಸಣೆಯಿಂದಲೂ ಕೂಡಾ ಇದು ಧೃಡಪಟ್ಟಿದೆ. ಎಂಟು ಜನ ಅಪರಾಧಿಗಳಲ್ಲಿ ಐವರು ಪೋಲೀಸರು. ಇವರೆಲ್ಲರನ್ನೂ ಹಮೀದಾ ಗುರುತಿಸಿದ್ದಳು. ಆದರೆ ತಪ್ಪಿತಸ್ಥರ ವಿರುದ್ಧ ಕೋರ್ಟಿನಲ್ಲಿ ವ್ಯಾಜ್ಯ ನಡೆಯುವಾಗ ಇಬ್ಬರೇ ಇಬ್ಬರು ಸಂಶಯಿಸಲ್ಪಟ್ಟ ಅಪರಾಧಿಗಳನ್ನು ಮಾತ್ರ ಅಧೀನಕ್ಕೆ (ಸುಪರ್ದು) ತೆಗೆದುಕೊಳ್ಳಲಾಯಿತು. ಈ ಪ್ರಕರಣ ನಡೆದು ಈಗಾಗಲೇ ಎರಡು ವರ್ಷಗಳಾಗಿದ್ದರೂ ಯಾವುದೇ ಮುಂದಿನ ಕಾನೂನು ಕ್ರಮ ತೆಗೆದುಕೊಂಡಿಲ್ಲ. ಅದರಲ್ಲಿ ಒಬ್ಬ ಆರೋಪಿ ತಲೆತಪ್ಪಿಸಿಕೊಂಡಿದ್ದಾನೆ. ಗಮನಿಸಬೇಕಾದ ಸಂಗತಿಯೆಂದರೆ ಆ ಐವರು ಪೋಲೀಸರ ವಿರುದ್ಧ ಯಾವುದೇ ಕ್ರಮವನ್ನು ತೆಗೆದುಕೊಂಡಿಲ್ಲ. ಇನ್ನೊಂದು ಭಯಾನಾತ್ಮಕ ವಿಚಾರವೆಂದರೆ ಹೀಗೆ ದೈಹಿಕ ಗಾಯದಿಂದ ಮಾನಸಿಕವಾಗಿ ರೋಗಗ್ರಸ್ಥೆಯಾದ ಹುಡುಗಿಯನ್ನು–ಬಾಲಾಪರಾಧಿಗಳ ಹೋಂನಲ್ಲಿ ಆಕೆಯ ಒಳಿತಿಗಾಗಿಯೇ ಬಂಧಿಸಲ್ಪಟ್ಟಿರುವುದು. ಸಾಕ್ಷಿಗಳು, ಹಾಗೂ ಹಮೀದಾಳ ಸಾಕ್ಷಿ-ಪ್ರಮಾಣಗಳನ್ನು ರೆಕಾರ್ಡ್ ಮಾಡಲು ಭಾಷಾಂತರಕಾರರಾಗಿರುವವರು ಇಂದು ಕಿರುಕುಳಕ್ಕೆ ಒಳಗಾಗಿದ್ದಾರೆ. ಅವರ ಮೇಲೆ ದೈಹಿಕ ಹಲ್ಲೆ ನಡೆಸಲಾಗಿದೆ. ಅವರ ಕುಟುಂಬಗಳನ್ನು ಬೆದರಿಸಲಾಗಿದೆ. ಅವರ ವ್ಯಕ್ತಿತ್ವದ ಸಮಗ್ರತೆಯನ್ನು ಪ್ರಶ್ನಿಸಲಾಗಿದೆ. ಕಾನೂನಿಗೆ ಸಹಾಯಿಸಲು ಪ್ರಾಮಾಣಿಕರಾಗಿ ಪ್ರಯತ್ನ ಮಾಡಿದರೆಂಬ ಕಾರಣಕ್ಕಾಗಿಯೇ ಮೇಲ್ಕಂಡ ಕಿರುಕುಳಗಳನ್ನು ಸಾಕ್ಷಿದಾರರು ಹಾಗೂ ಭಾಷಾಂತರಕಾರರು ಅನುಭವಿಸಬೇಕಾಗಿದೆ.

1993ರ ಫೆಬ್ರವರಿಯಲ್ಲಿ ಹಮೀದಾಳನ್ನು ಅವಳ ಊರು ಬಾಂಗ್ಲಾದೇಶದಿಂದ ಪ್ರಥಮ ಬಾರಿಗೆ ಭಾರತಕ್ಕೆ ಕರೆದುಕೊಂಡು ಬಂದವನು ರಶೀದ್ ಖಾನ್. ಹಣಗಳಿಸುವ, ಚನ್ನಾಗಿ ಊಟ ಮಾಡುವ ಹಾಗೂ ಉಡುಪು ಧರಿಸುವಂತಹ ಆಮಿಷಗಳಿಂದಲೇ ಆಕೆಗೆ ಖುಷಿಯಾಗಿರಬೇಕು. ಹಮೀದಾಳ ತಂದೆಯನ್ನು ಅಂಕಲ್ ಅಥವಾ ಮಾಮೂ ಎಂದು ಕರೆಯುತ್ತಿದ್ದ ರಶೀದ್ ಆಕೆಯ ತಂದೆ ಅಬ್ದುಲ್ ಮಜೀದ್‌ರವರನ್ನು ಬರಿಸಾಲ್ ಜಿಲ್ಲೆಯ ಮನೆಯಲ್ಲಿ ಆಗಾಗ್ಗೆ ಭೇಟಿಯಾಗುತ್ತಿದ್ದ. ಅವನು ದೆಹಲಿಯಲ್ಲಿ ಬಹಳ ಕಾಲ ವಾಸವಾಗಿದ್ದರಿಂದ-ಭೇಟಿಯಾದಾಗಲೆಲ್ಲಾ ಹಮೀದಾಳ ತಂದೆಯ ಹತ್ತಿರ ದೆಹಲಿಯಲ್ಲಿ ಸಿಗುವ ಒಳ್ಳೆಯ ಅವಕಾಶಗಳ ಬಗ್ಗೆಯೇ ಹೆಚ್ಚು ಮಾತನಾಡುತ್ತಿದ್ದುದು. ಹಮೀದಾ ಆತನೊಡನೆ ಬಂದರೆ ಆಕೆಗೆ ಉತ್ತಮ ಬದುಕು ರೂಪಿಸುವುದಾಗಿ ಆತ ಭರವಸೆ ಇತ್ತ, ಢಾಕಾದ ದಿನ ಪತ್ರಿಕೆ 'ದಿ ಡೈಲಿ ಸ್ಟಾರ್' ಪ್ರಕಟಿಸಿದ ಸುದ್ದಿಯೊಂದರ ಪ್ರಕಾರ ಹಮೀದಾ ಆಕೆಯ

ಐದನೇ ವರ್ಷದಲ್ಲಿ ತಾಯಿಯನ್ನು ಕಳೆದುಕೊಂಡುದಾಗಿ ಹಾಗೂ ಆಕೆಯ ತಂದೆ ಇತರ ಇಬ್ಬರು ಹೆಂಡಂದಿರು ಹಾಗೂ ಮಕ್ಕಳನ್ನು ಹೊಂದಿರುವುದಾಗಿ ತಿಳಿದು ಬರುತ್ತದೆ. ರಶೀದ್ ಹಮೀದಾಳಿಗೆ ಎಲ್ಲಾ ರೀತಿಯ ಭ್ರಮೆಗಳನ್ನು ಹುಟ್ಟಿಸಿ, ಭರವಸೆ ಇತ್ತು ಆಸೆ ಹುಟ್ಟಿಸಿದು ದಾಗಿ ತಿಳಿದು ಬರುತ್ತದೆ.

**ದುಃಸ್ವಪ್ನ ಪ್ರಾರಂಭವಾಯಿತು.**

ಪೋಷಣೆಯಿಲ್ಲದ ಬಾಂಗ್ಲಾ ದೇಶದ ಹುಡುಗಿ ಕೂಡಾ ರಶೀದನಿಗೆ ಒಂದು ಆಸ್ತಿಯಾದಳು. ಅವಳದು ಹೆಣ್ಣಿನ ದೇಹ, ಹೆಣ್ಣಿನ ದೇಹಕ್ಕೆ ಹಲವಾರು ಉಪಯುಕ್ತತೆ ಗಳಿವೆ. ಹಮೀದಾಳನ್ನು ಭ್ರಮ ನಿರಸನಗೊಳಿಸುವಲ್ಲಿ ರಶೀದ್ ಹೆಚ್ಚೇನೂ ಸಮಯ ಹಾಳುಮಾಡಲಿಲ್ಲ. ಅವನು ವಾಸವಾಗಿದ್ದ ದೆಹಲಿಯ ರಿಸೆಟ್ಲಮೆಂಟ್ ಕಾಲೋನಿಯ ಟ್ರಿಲೋಕ್‌ಪುರಿಯನ್ನು ತಲುಪಿದಾಕ್ಷಣವೇ ಅವನು ಆಕೆಯನ್ನು ಲೈಂಗಿಕವಾಗಿ ಬಯ್ಯುವುದಕ್ಕೆ ಪ್ರಾರಂಭಿಸಿದ್ದನು.

ನೀವು ಕೇವಲ ಹತ್ತು ವರ್ಷದವರಾಗಿದ್ದರೆ ಅತ್ಯಾಚಾರ ಬರಿಯ ಅವಮಾನಕರ, ಭಯಂಕರ ಮಾತ್ರ ವಲ್ಲ, ಅದು ದೈಹಿಕವಾಗಿ ಹೆಚ್ಚು ನೋವಿನಿಂದ ಕೂಡಿರುವುದಾಗಿರುತ್ತದೆ. ಟ್ರಿಲೋಕ್‌ಪುರಿಯಲ್ಲಿ ರಶೀಧ್‌ನ ಅಕ್ಕಪಕ್ಕದವರು ಹಮೀದಳು ನೋವಿನಿಂದ ಕೂಗಿಕೊಳ್ಳುವುದನ್ನು ಕೇಳಿದ್ದರು. ಆದರೆ ಅವರು ಆತನ ವಿರುದ್ಧ ಕ್ರಮ ತೆಗೆದುಕೊಳ್ಳುವುದರಲ್ಲಿ ಮೂರು ತಿಂಗಳುಗಳೇ ಕಳೆದು ಹೋಗಿದ್ದವು. ಕೊನೆಯಲ್ಲಿ ಅವರು ಆತನ ಮನೆಯಿಂದ ಆತನನ್ನು ಈಚೆಗೆಳೆದು ಹೊಡೆದರು. ರಶೀದ್ ಆ ಹುಡುಗಿಯನ್ನು ಬಾಂಗ್ಲಾದೇಶಕ್ಕೆ ಕರೆದು ಕೊಂಡು ಹೋಗಬೇಕೆಂದು ಅವನಿಂದ ವಚನ ಸ್ವೀಕರಿಸಿ ದರು.

ಆದರೆ ರಶೀದ್ ಈ ಮೋಸದ ವ್ಯವಹಾರವನ್ನು ಕಳೆದುಕೊಳ್ಳುವುದಕ್ಕೆ ಸಿದ್ಧನಿರಲಿಲ್ಲ, 1993ರ ಜೂನ್‌ನಲ್ಲಿ ಅವನು ಹಮೀದಾಳನ್ನು ನ್ಯೂ ಸೀಮಾಪುರಿಯ ಮೆಹತಾಬ್ ಬಳಿ ಕಳುಹಿಸಿದ. ಮೆಹತಾಬ್ ಅವನ ವ್ಯವಹಾರದ ಸಂಗಡಿಗನಾಗಿದ್ದ. ಈ ಮೆಹತಾಬ್‌ಗೆ ಸ್ಥಳೀಯ ಪೋಲೀಸರ ಜೊತೆ ವಿಶ್ವಾಸಾರ್ಹ ಸಂಬಂಧ ವಿತ್ತು.

ಹಮೀದಾಳಲ್ಲಿ ಎಲ್ಲಿಯೋ ಆಸೆ ಇದ್ದರೂ ಅವಳ ಉಗ್ರ ಪರೀಕ್ಷೆ ಕೊನೆ ತಲುಪುತ್ತದೆಯೆಂಬ ಸತ್ಯವನ್ನು ಅವಳು ಬೇಗನೇ ಕಂಡುಕೊಂಡಳು. ಒಂದು ರಾತ್ರಿ ಅವಳು ಮಲಗಿರುವಾಗ ಮೆಹತಾಬ್ ಆಕೆಯನ್ನು ಎಬ್ಬಿಸಿ ತನ್ನ ಜೊತೆ ಬರುವಂತೆ ಕೇಳಿಕೊಂಡ. ಭಯದಿಂದ ಆಕೆ ತಿರಸ್ಕರಿಸಿದಳು. ಆತ ಆಕೆಗೆ ಹೊಡೆದು ತಕ್ಷಣವೇ ಹೆಜ್ಜೆ ಇಡುವಂತೆ ಹೇಳಿದ. ಅವಳನ್ನು ಪೋಲಿಸ್ ಬೂತ್‌ಗೆ ಕರೆದುಕೊಂಡು ಹೋದ. ಅಲ್ಲಿ ಮೆಹತಾಬ್ ಹಾಗೂ ಇಬ್ಬರು ಪೋಲೀಸರು ಆಕೆಯ ಮೇಲೆ ಅತ್ಯಾಚಾರ ನಡೆಸಿದರು. ಎರಡು ಮೂರು ದಿನದ ನಂತರ ಮತ್ತೆ ಮೆಹತಾಬ್ ರಾತ್ರಿಯಲ್ಲಿ ಅವಳನ್ನು ಕರದುಕೊಂಡು ಹೋದ. ಈ ಸಮಯದಲ್ಲಿ ಅವಳ ಹಣೇಬರಹ ಅದೇ ಸ್ಥಳದ ಎರಡಂತಸ್ತಿನ ಮನೆಯಲ್ಲಿ ಕಾದಿತ್ತು. ಈ ಮನೆ ಪ್ರಧಾನ್ ಎಂದು ಕರೆಯಲ್ಪಡು ತ್ತಿದ್ದ ಓಮ್ ಪ್ರಕಾಶ್‌ರವರಿಗೆ ಸೇರಿದ ಮನೆಯಾಗಿತ್ತು. ಈತ ಒಬ್ಬ ಪ್ರಭಾವಿ ವ್ಯಕ್ತಿ. ಅಕ್ಕ-ಪಕ್ಕ ದವರಿಗಿಂತ ಸಮೃದ್ಧವಂತನಾಗಿದ್ದನು. ಅವನಿಗೆ ಇಬ್ಬರು ಹೆಂಡಂದಿರು. ಅದರಲ್ಲೊಬ್ಬಳು ವಿಮಲ ಮನೆಯಲ್ಲಿರಲಿಲ್ಲ. ಹಮೀದಾಳನ್ನು ವಿಮಲಾಳ ಕೋಣೆಗೆ ಕರೆದೊಯ್ಯಲಾಯಿತು. ಅಲ್ಲಿ ಮೆಹತಾಬ್, ಓಮ್ ಪ್ರಕಾಶ್ ಹಾಗೂ ಒಬ್ಬ ಪೋಲೀಸಿನವನು ಅವಳ ಮೇಲೆ ಅತ್ಯಾಚಾರವೆಸಗಿದರು. ಹಮೀದಾ ಕೂಗಿ ಕೊಂಡಾಗ ಅವಳು ಸುಮ್ಮನಿರದಿದ್ದರೆ ಅವಳನ್ನು ಹೊಡೆಯುವುದಾಗಿ ಹೆದರಿಸಲಾಯಿತು. ಆ ಮರುದಿನ ರಾತ್ರಿ ಆಕೆಯನ್ನು ಮತ್ತೆ ಪೋಲೀಸ್ ಬೂತ್‌ಗೆ ಕರೆದು ಕೊಂಡು ಹೋಗಿ ಇಬ್ಬರು ಪೋಲೀಸರು ಹಾಗೂ ಮೆಹತಾಬ್ ಅವಳ ಮೇಲೆ ಅತ್ಯಾಚಾರವೆಸಗಿದರು. ಆ ನಂತರದ ರಾತ್ರಿಯೂ ಅವಳನ್ನು ಮತ್ತೊಂದು ಪೋಲೀಸ್‌ಬೂತ್‌ಗೆ ಕರೆಯೊಯ್ದು ಮತ್ತಿಬ್ಬರು ಪೋಲೀಸರು ಹಾಗೂ ಮೆಹತಾಬ್ ಮತ್ತೆ ಅತ್ಯಾಚಾರ ವೆಸಗಿದರು. ಹಮೀದಾ ಅವಳ ಭಾಷಾಂತಂಕಾರರಿಗೆ ಹೇಳಿದ ಪ್ರಕಾರ ಮೆಹತಾಬ್ ಮೊದಲು ಅವಳ ಮೇಲೆ ಅತ್ಯಾಚಾರವೆಸಗಿ ನಂತರ ಪೋಲೀಸರಿಗೆ ಒಪ್ಪಿಸುತ್ತಿದ್ದ. ಅವಳ ಯೋನಿಯಲ್ಲಿ ಯಾವುದೋ ಎಣ್ಣೆ ಹಾಕಿ ನಂತರಕ್ಕೆ ಸಿದ್ಧವಾಗುವಂತೆ ಮಾಡುತ್ತಿದ್ದ. ಜಾರುವಂತೆ ಅಥವಾ ನುಣುಪು ಚಲನೆ ಉಳ್ಳದ್ದಾಗಿ ಮಾಡಲು ಅವಳ

ಕಾಲುಗಳ ಮಧ್ಯೆ ಪೋಲೀಸಿನವರು ಉಗುಳುತ್ತಿದ್ದು ದ್ದಾಗಿಯೂ ಆಕೆ ಹೇಳಿದಳು.

ಜೂನ್ 16ರಂದು ಮೆಹತಾಬ್ ಮನೆಯಲ್ಲಿ ಇಲ್ಲ ದಿರುವಾಗ ಹಮೀದಾ ತಪ್ಪಿಸಿಕೊಂಡು ಹೋಗುವ ಅವಕಾಶ ಹೊಂದಿದಳು. ಆದರೆ ನೆರೆಹೊರೆಯಲ್ಲಿ ಓಡಾಡುವಾಗಲೇ ದಾರಿ ತಪ್ಪಿದಳು. ಹಿಂದಿ ಗೊತ್ತಿಲ್ಲದ ಆಕೆಗೆ ಯಾರೊಡನೆಯೂ ಮಾತನಾಡಲಿಕ್ಕೆ ಸಾಧ್ಯವಾಗ ಲಿಲ್ಲ. ಅದೃಷ್ಟವಶಾತ್ ಆ ದಿಗ್ಭ್ರಾಂತ ಹುಡುಗಿ ಕೆಲವು ಬಾಂಗ್ಲಾದೇಶದವರನ್ನು ಭೇಟಿಯಾದಳು. ಅವರೊಡನೆ ತನಗಾದುದರ ಬಗ್ಗೆ ಹೇಳಿದಳು. ಶಮೀಮ್ ನೆರೆ ಹೊರೆಯಲ್ಲಿ ಪಾನ್ ಶಾಪ್ ನಡೆಸುವವಳು. ಇಡಿಯ ಗುಂಪಿನಲ್ಲಿ ಆ ಹುಡುಗಿ ಅತ್ಯಾಚಾರಕ್ಕೊಳಗಾದುದನ್ನು ಕೇಳಿದಳು. ಆ ಗುಂಪಿನಲ್ಲಿ ಸೇರಿಕೊಂಡಾಗಲೇ ಆಕೆಗೆ ಗೊತ್ತಾದುದು-ಆ ಹುಡುಗಿಗೆ ಕೇವಲ ಹತ್ತೇ ವರುಷ ಎಂಬುದು. ಆಕೆಗೆ ಆಘಾತವಾಗಿತ್ತು. ಆ ಹುಡುಗಿಯ ಕತೆ ಕೇಳುತ್ತಾ ಹೋದ ಹಾಗೆ ಶಮೀಮ್‌ಗೆ ಇನ್ನೂ ಭಯಾನಕ ಅನ್ನಿಸಿತು. ಶಮೀಮ್, ರಾಜು-ಒಬ್ಬ ಮೇಸ್ತ್ರಿ, ಕಜೋಲ್‌ದತ್ತ, ಮೌಲಾನ ನಸೀಮ್ ಹಾಗೂ ಇತರ ಕೆಲವು ಸೀಮಾಪುರಿಯ ವಾಸಿಗರೊಡನೆ ಹಮೀದಾಳನ್ನು ಪೋಲೀಸ್ ಠಾಣೆಗೆ ಕರೆದೊಯ್ದರು.

ಯಾವಾಗ ಪೋಲೀಸ್‌ನವರನ್ನು ಜನರು ಒತ್ತಾಯಿಸಿ ದರೋ ಆಗ ಪೋಲೀಸ್ ಅದೇ ಜಾಗದಲ್ಲಿ, ಆಗಿಂದಾಗ್ಗೆ ವಿಚಾರಣೆ ನಡೆಸಲು ಒಪ್ಪಿದರು. ಆ ಹುಡುಗಿ ಅವರನ್ನು ಓಮ್ ಪ್ರಕಾಶ್ ಮನೆಗೆ ಕರೆದುಕೊಂಡು ಹೋದಳು. ಎಲ್ಲಿ ಆಕೆಯು ಅತ್ಯಾಚಾರವಾಯಿತೋ ಆ ಕೊಠಡಿಗೆ ಕರೆದೊಯ್ದಳು. ಒಂದು ಬಿಳಿಯ ಶೀಟನ್ನು ನೆಲದ ಮೇಲೆ ಹಾಕಲಾಗಿತ್ತೆಂದು ಹೇಳಿದಳು. ಅನಂತರ ಅತ್ಯಾಚಾರವೆಸಗಿದ ಪೋಲೀಸ್‌ಬೂತ್ ಬಳಿ ಕರೆದೊಯ್ದಳು. ಅಷ್ಟೊಂದು ಓಪನ್ ಆಗಿರುವ ಸ್ಥಳದಲ್ಲಿ ಹೇಗೆ ಅತ್ಯಾಚಾರವೆಸಗಿದರು ಎಂದು ಕೇಳಲಾಗಿ ಆಕೆ ಕಿಟಕಿಗಳಿಗೆಲ್ಲಾ ಚಾಪೆ(chatai) ಹಾಕಿದ್ದಾಗಿ ನುಡಿ ದಳು. ಅಲ್ಲಿಂದ ಇನ್ನೊಂದು ಪೋಲೀಸ್ ಬೂತ್‌ಗೆ ಕರೆ ದೊಯ್ದಳು. ಅಲ್ಲಿಯೂ ಶೀಟ್ ಬಳಸಿದುದಾಗಿ ನುಡಿದಳು. ಯಾಕೆ ಸಹಾಯಕ್ಕಾಗಿ ಕೂಗಿಕೊಳ್ಳಲಿಲ್ಲ ಎಂದು ಕೇಳಿದಾಗ ಹಮೀದ ಅವರೆಲ್ಲಾ ಹೆದರಿಸಿದ್ದಾಗಿ ನುಡಿದಳು. ಈ ಎಲ್ಲಾ ವಿಚಾರಣೆ ಮುಗಿದ ಮೇಲೆ ಪೋಲೀಸರು ಪೋಲೀಸ್ ಸ್ಟೇಷನ್‌ಗೆ ಹಿಂತಿರುಗಿದರು. ಆ ಹುಡುಗಿ ಹುಚ್ಚಿ ಹಾಗೂ ನಾನ್‌ಸೆನ್ಸ್ ಮಾತನಾಡು ತ್ತಾಳೆ ಎಂದು ಹೇಳುವುದರ ಮೂಲಕ ಪೋಲೀಸರು ಈ ಕೇಸನ್ನು ದಾಖಲು ಮಾಡಿಕೊಳ್ಳಲು ನಿರಾಕರಿಸಿದರು.

ಈ ಹಂತದಲ್ಲಿ ಈ ಹುಡುಗಿಗೆ ಹತ್ತಿರವಾದ ಕಾನೂನು ಬಾಹಿರ ಬಾಂಗ್ಲಾದೇಶಿಗಳು ಈಕೆಯ ವಿಚಾರದಲ್ಲಿ ಕ್ರಿಯಾಶೀಲ ಪಾತ್ರವಹಿಸಲು ಸಾಧ್ಯವಾಗುವುದಿಲ್ಲ ಎನಿಸಿದಾಗ ಶಮೀಮ್, ರಾಜು ಮತ್ತು ಕಜೋಲ್‌ದತ್ತ ಅವರು 'ಜನಸತ್ತ'ಕ್ಕೆ ಈ ವಿಚಾರ ತೆಗೆದುಕೊಂಡು ಹೋಗುವುದಾಗಿ ನಿರ್ಧರಿಸಿದರು. ಅವರು ಕುಮಾರ್ ಸಂಜಯ್ ಸಿಂಗನ್ನು ಭೇಟಿಯಾದರು. ಈತ ಈ ವಿಚಾರ ವನ್ನು ಮೊದಲಬಾರಿಗೆ 'ಜನಸತ್ತ'ದಲ್ಲಿ ಬೆಳಕಿಗೆ ತಂದರು. ಈ ಹಂತದಲ್ಲಿ ಸ್ಥಳೀಯ ಪೋಲೀಸರು ಗಲಿಬಿಲಿಗೊಂಡು 'ಜನಸತ್ತ' ಆಫೀಸಿಗೆ ಫೋನಿಸಿ ಅತ್ಯಾಚಾರಕ್ಕೆ ಒಳಗಾದ ಹುಡುಗಿ ಅಲ್ಲಿದ್ದಾಳಾ ಎಂದು ವಿಚಾರಿಸಿದರು. ಈಗ ಪೇಪರ್‌ನವರು ಈ ಇಡಿಯ ಸನ್ನಿವೇಶದಲ್ಲಿ ಬಂದದ್ದ ರಿಂದ ಪೋಲೀಸರಿಗೆ ಕೇಸನ್ನು ರಿಜಿಸ್ಟರ್ ಮಾಡಿಕೊಳ್ಳದೆ ಬೇರೆ ದಾರಿಯೇ ಇರಲಿಲ್ಲ. ಹಮೀದಾಗೆ ಐವರು ಪೋಲೀಸರ ಹೆಸರುಗಳನ್ನು ಹೇಳಲಿಕ್ಕೆ ಆಗದಿದ್ದರೂ ಅವರ ದೈಹಿಕ ಸ್ವರೂಪಗಳನ್ನು ವಿವರಿಸಿದಳು. ಅದರಲ್ಲಿ ಒಬ್ಬಾತ ರೋಮವುಳ್ಳ ಕೈ ಹಾಗೂ ಎದೆ ಹೊಂದಿರುವು ದಾಗಿ, ಮತ್ತೊಬ್ಬನಿಗೆ ಮುಂದಿನ ಹಲ್ಲು ಇಲ್ಲದಿರುವುದಾಗಿ ಆಕೆ ಹೇಳಿದಳು. (ಆಕೆ ಹೆಸರಿಸಿದ ಪೋಲಿಸ್ ಬೂತ್‌ಗಳಲ್ಲಿ ಕರ್ತವ್ಯಕ್ಕೆ ಹಾಜರಿದ್ದ ಪೋಲೀಸರ ಚಹರೆಯನ್ನು ಈ ವಿವರಣೆ ಹೋಲುತ್ತದೆ). ಹಮೀದಾ ಓಮ್ ಪ್ರಕಾಶ್ ಹಾಗೂ ಮೆಹತಾಬ್‌ರ ವಿಳಾಸ ಹಾಗೂ ಹೆಸರುಗಳನ್ನು ಕೊಟ್ಟಳು. ರಶೀದ್ ಖಾನನ ವಿಳಾಸ ಪತ್ತೆ ಮಾಡ ಲಾಗದ ಕಾರಣ ಅವನನ್ನು ಬಂಧಿಸಲಾಗಲಿಲ್ಲ. ಓಮ್ ಪ್ರಕಾಶ್ ಹಾಗೂ ಮೆಹತಾಬ್ ಇಬ್ಬರನ್ನೂ ಪೋಲೀಸ್ ಠಾಣೆಗೆ ಕರೆಸಲಾಯಿತು. ಹಮೀದಾ ಅವರನ್ನು ಗುರುತಿಸಿದ ಮೇಲೆ ಅವರನ್ನು ಬಂಧಿಸಲಾಯಿತು. ಸಾಕ್ಷಿಗಳು ಹೇಳುವ ಪ್ರಕಾರ ಈ ಹಂತದಲ್ಲಿ ಅವರು ತಮ್ಮ ಅಪರಾಧವನ್ನು ಒಪ್ಪಿಕೊಂಡರು. ಮರುದಿನ ಬೆಳಿಗ್ಗೆ ಶಮೀಮ್ ಮತ್ತು ಇತರರು ಹಮೀದಾಳನ್ನು ವೈದ್ಯಕೀಯ ತಪಾಸಣೆಗೋಸ್ಕರ G.T.B. ಆಸ್ಪತ್ರೆಗೆ ಕರೆದುಕೊಂಡು ಹೋದರು. ಆ ಪ್ರಕಾರ ಆಕೆಗೆ

ಅತ್ಯಾಚಾರವಾಗಿರುವುದಾಗಿಯೂ, ಹಾಗೂ ಆಕೆಯ ವಯಸ್ಸು 10-11 ಇರಬಹುದೆಂದೂ ಧೃಢಪಟ್ಟಿತು. ಹಮೀದಾಳ ಎದೆಯ ಭಾಗದಲ್ಲಿ ಗಾಯ ಹಾಗೂ ಉಗುರಿನ ಗುರುತುಗಳಿದ್ದವು. ಆ ನಂತರ ಅವಳನ್ನು ಬಾಲಾಪರಾಧಿಗಳ ಹೋಂ ನಿರ್ಮಲ್ ಛಾಯಾಗೆ ಕಳಿಸ ಲಾಯಿತು. ಹೀಗೆ ಅವಳ ಸೆರೆಮನೆ ಪ್ರಾರಂಭವಾದದ್ದು ಎರಡು ವರ್ಷಗಳವರೆಗೆ ಮುಂದುವರೆದಿದೆ.

## ಅತ್ತಿಂದಿತ್ತ ಎಡೆತಾಕಿದ ನ್ಯಾಯಾಲಯ

ಜನಸತ್ತದಲ್ಲಿ ಪ್ರಕಟವಾದ ಈ ಸುದ್ದಿ ತಕ್ಷಣವೇ ಹಾಲಾಹಲವನ್ನೆಬ್ಬಿಸಿತು. ಬೇಕಿಲ್ಲದೇ ಈ ಕೇಸನ್ನು ದಾಖಲು ಮಾಡಿದ ಮೇಲೆ ಇದನ್ನು ಮುಂದೆ ವಿಚಾರಣೆ ಮಾಡುವುದರಲ್ಲಿ ಯಾವುದೇ ಆಸಕ್ತಿಯನ್ನು ಪೋಲೀಸರು ತೋರಿಸಲಿಲ್ಲ. ಮಾಮೂಲಿಯಂತೆ 1993ರ ಜೂನ್ 21ರಂದು ಓಮ್ ಪ್ರಕಾಶ್ ಹಾಗೂ ಮೆಹ್ತಾ ಇಬ್ಬರನ್ನೂ ಶಹದಾರ ಜಿಲ್ಲಾ ಮ್ಯಾಜಿಸ್ಟ್ರೇಟ್ ಡಿ.ಕೆ. ಮಲ್ಹೋತ್ರ ಅವರ ಕೋರ್ಟಿನಲಿ ಹಾಜರು ಪಡಿಸಿದರು. ಮ್ಯಾಜಿಸ್ಟ್ರೇಟ್‌ರವರು ಶೋಧನಾಧಿಕಾರಿ ರಾಮಚಂದ್ರನ್ ಅವರಿಗೆ ಇನ್ನಿತರ ಆರೋಪಿಗಳಾದ ಪೋಲೀಸರನ್ನು ಯಾಕೆ ಹಾಜರುಪಡಿಸಲಿಲ್ಲ ಎಂದು ಕೇಳಿದರು. ಸ್ಯೂ ಸೀಮಾಪುರ ಪೋಲೀಸ್ ಠಾಣೆಯಲ್ಲಿ ಪೋಲೀಸ್ ಅಧಿಕಾರಿಗಳ ಸಮ್ಮುಖದಲ್ಲಿ ಹಮೀದಾ 'ಪೋಲೀಸ್ ಐಡೆಂಟಿಟಿ' ಪೆರೇಡ್‌ನಲ್ಲಿ ಅವರನ್ನು ಗುರುತಿಸಲಿಲ್ಲ ಎಂದು ರಾಮಚಂದ್ರನ್‌ರವರು ಉತ್ತರಿಸಿದರು. ಆಗ ನ್ಯಾಯಾಧೀಶರು ಕೋರ್ಟಿನಲ್ಲಿ ಅಥವಾ ಬಂದೀಖಾನೆಯಲ್ಲಿ ನಡೆಯಬೇಕಾಗಿದ್ದ 'ಐಡೆಂಟಿಟಿ ಪೆರೇಡ'ನ್ನು ಪೋಲೀಸ್ ಠಾಣೆಯಲ್ಲಿ ನಡೆಸಲು ಆತನಿಗೆ ಅಧಿಕಾರ ಕೊಟ್ಟವರು ಯಾರು ಎಂದು ವಿಚಾರಿಸಿದರು. ರಾಮಚಂದ್ರನ್‌ರವರಿಗೆ ಪ್ರತ್ಯುತ್ತರವೀಯಲು ಸಾಧ್ಯವಾಗಲಿಲ್ಲ. ಇನ್ನೂ ದರಿದ್ರ ಸಂಗತಿಯೆಂದರೆ ಭಾಷಾಂತರಕಾರರಿಲ್ಲದ ಕಾರಣ ಹಮೀದಾಳ ಹೇಳಿಕೆಗಳನ್ನು ರೆಕಾರ್ಡ್ ಮಾಡಿರಲಿಲ್ಲ. ಜೂನ್ 23 ರಂದು ಕುಮಾರ್ ಸಂಜಯ್ ಸಿಂಗ್ ಈ ಭಾಷಾಂತರ ಮಾಡುವುದಾಗಿ ಹೇಳಿದರೂ ಆತ ಹಮೀದಾಳ ಕಡೆಯವನು ಎಂಬುದರ ಮೇಲೆ ಅದನ್ನು ತಿರಸ್ಕರಿಸಲಾಯಿತು. ಈ ಕೇಸನ್ನು ಸ್ಪೆಷಲ್ ಬ್ರಾಂಚ್‌ಗೆ ವರ್ಗಾಯಿಸಲಾಯಿತು. ಕೆ.ಎಲ್ ಮೀನ ಶೋಧನಾಧಿಕಾರಿಯಾಗಿ ನೇಮಕಗೊಂಡರು. ಜೂನ್ 24, 1993 ಮುಂದಿನ ಕೋರ್ಟಿನ ದಿನಾಂಕ ಎಂದು ಹೇಳಿದರೂ ಪೋಲಿಸರು ಒಬ್ಬ ಭಾಷಾಂತರಕಾರರನ್ನು ನೇಮಿಸಲು ಕ್ರಮ ತೆಗೆದುಕೊಳ್ಳಲೇ ಇಲ್ಲ. ಆಗ ನ್ಯಾಯಾಲಯ ಜೂನ್ 25 ರೊಳಗೆ ಒಬ್ಬ ಭಾಷಾಂತರಕಾರರನ್ನು ನೇಮಿಸಲೇ ಬೇಕೆಂದು ಆಜ್ಞಾಪಿಸಿತು.

ಈ ಹಂತದಲ್ಲಿ ರೋಮಾ ದೇಬಾಬ್ರಾತ–ಡೆಲ್ಲಿ ವಿಶ್ವವಿದ್ಯಾನಿಲಯದ ಆಧುನಿಕ ಭಾರತೀಯ ಭಾಷೆಗಳಲ್ಲಿ ರೀಡರ್ ಆಗಿ ಕೆಲಸ ಮಾಡುತ್ತಿದ್ದ ಈಕೆ ಪೇಪರ್‌ನಲ್ಲಿ ಈ ಪ್ರಕರಣದ ಬಗ್ಗೆ ಓದಿದರು. ಈ ಹುಡುಗಿಯ ಅವಸ್ಥೆಯ ಬಗ್ಗೆ ನೊಂದ ಈಕೆ ಭಾಷಾಂತರಕಾರರಿಲ್ಲದ ಕಾರಣ ಇಡಿಯ ಪ್ರಕರಣ ಹಿಮ್ಮುಖವಾಗುತ್ತಿರುವುದನ್ನು ನೋಡಿ ದಿಗ್ಭ್ರಮೆಗೊಂಡರು. ಆಕೆ ಕಾರ್ಲ್ ಆರ್ ಡೂಮಾ ಜಿಲ್ಲೆಯ ನ್ಯಾಯಾಲಯಕ್ಕೆ ಹೋಗಿ ತಾವು ಭಾಷಾಂತರ ಮಾಡುವುದಾಗಿ ಹೇಳಿದರು. ಅದೇ ದಿನ ಕೆ.ಎಲ್ ಮೀನ ಆರ್. ಕೆ. ಚೌಧರಿಯವರನ್ನು ಭಾಷಾಂತರಕಾರರಾಗಿ ತಂದರು. ಇವರು ಪೋಲೀಸ್ ಅಧಿಕಾರಿಗಳ ಮಕ್ಕಳಿಗೆ ಪಾಠ ಹೇಳಿಕೊಡುತ್ತಿದ್ದ ಒಬ್ಬ ನಿವೃತ್ತ ಸ್ಕೂಲ್ ಶಿಕ್ಷಕರು. ನ್ಯಾಯಾಲಯವು ಚೌಧರಿಯವರನ್ನು ಅಧಿಕೃತ ಭಾಷಾಂತರಕಾರರನ್ನಾಗಿ ನೇಮಿಸಿತು.

ಲಾಯರ್ ಪ್ರದೀಪ್ ತ್ಯಾಗಿ ರೋಮರ ಪರವಾಗಿ ವಾದಿಸಿದರೂ ನ್ಯಾಯಾಲಯ ಆರ್. ಕೆ. ಚೌಧರಿಯವರ ಋಜುವಾತು ಪತ್ರಗಳನ್ನೇ ಒಪ್ಪಿಕೊಂಡಿತು. ಈ ಹುಡುಗಿಯ ಹೇಳಿಕೆಯನ್ನು ನ್ಯಾಯಾಧೀಶರ ವಿಶ್ರಾಂತಿ ಕೊಠಡಿಯಲ್ಲಿ ಮೂರು ಘಂಟೆಯ ಕಾಲದವರೆಗೆ ತೆಗೆದುಕೊಳ್ಳಲಾಯಿತು. ಆನಂತರ ಆಕೆಯನ್ನು ನಿರ್ಮಲ್ ಛಾಯಾಕ್ಕೆ ಕಳಿಸಲಾಯಿತು. ಆನಂತರದ ಹಿಯರಿಂಗ್ ಮ್ಯಾಜಿಸ್ಟ್ರೇಟ್ ಎಂ.ಕೆ. ಹಂಡಾರವರ ನ್ಯಾಯಾಲಯದಲ್ಲಿ ನಡೆಯಿತು. ಈ ಹಂತದಲ್ಲಿ ನ್ಯಾಯಾಧೀಶರು FIR ನಲ್ಲಿ ಹಾಗೂ ರೆಕಾರ್ಡ್ ಮಾಡಿದ ಹೇಳಿಕೆಗಳಲ್ಲಿ ಇರುವ ಅಂತರವನ್ನು ಗಮನಿಸಿದರು. ಆರ್ ಕೆ. ಚೌಧರಿಯವರ ವಿವರಣೆ ಮೂಲಕ್ಕಿಂತ ಭಿನ್ನವಾಗಿತ್ತು, ಭಾಷಾಂತರಕಾರ ಉದ್ದೇಶಪೂರ್ವಕವಾಗಿಯೇ ಆ ಹುಡುಗಿಯ ಹೇಳಿಕೆಗಳನ್ನು ಬದಲಾಯಿಸಿದುದಾಗಿ ತಿಳಿದು ಬಂತು.

ಆರ್. ಕೆ. ಚೌಧರಿಯವರನ್ನು ಬದಲಾಯಿಸಿ ರೋಮಾರವರನ್ನು ಶಹದಾರ ಸ್ಪೆಷಲ್ ಬ್ರಾಂಚ್‌ಗೆ ಭಾಷಾಂತರಕಾರರಾಗಿ ಬರುವಂತೆ ಆಹ್ವಾನಿಸಲಾಯಿತು. ಈ ರೀತಿ ಸಹಾಯ ನೀಡುವುದರಿಂದ ಭಯಂಕರ ಉಗ್ರ ಪರೀಕ್ಷೆಗೆ ಎರಡು ವರ್ಷಗಳ ಕಾಲ ಎಳೆಯಲ್ಪಡುತ್ತೇವೆಂದು ಆಗ ರೋಮಾ ಎಣಿಸಿರಲಿಲ್ಲ.

ಅತ್ಯಾಚಾರಕ್ಕೆ ಒಳಗಾಗಿರುವವರಿಗೆ ಕರುಣೆ ತೋರಿಸುವುದರಿಂದ ಕಿರುಕುಳ, ದೈಹಿಕ ದೌರ್ಜನ್ಯ, ಬದುಕಿನ ಬೆದರಿಕೆ, ಕುಟುಂಬದ ಸದಸ್ಯರಿಗೆ ಬೆದರಿಕೆ ಹಾಗೂ ಅವರ ನಿತ್ಯ ಜೀವನ ಏರು-ಪೇರು ಆಗುತ್ತದೆಯೆಂಬುದನ್ನು ಆಕೆ ಕನಸು ಮನಸಿನಲ್ಲಿಯೂ ಎಣಿಸಿರಲಿಕ್ಕಿಲ್ಲ. ಅಥವಾ ಸಮರ್ಥಿಸಿಕೊಳ್ಳುವ ಹಂತದಲ್ಲಿ ನಡೆಯುವ ಒಳಸಂಚಿನಿಂದಾಗಿ–ಆಧಾರವಿಲ್ಲದ ಕಾರಣಕ್ಕಾಗಿ ವಿಶ್ವಾಸಾರ್ಹವಾಗಿ ಭಾಷಾಂತರಕಾರಳಾಗಿ ಸೇವೆ ಸಲ್ಲಿಸುತ್ತಿದ್ದ ಆಕೆಯನ್ನು ಕೇಸ್‌ನಿಂದ ತೆಗೆದು ಹಾಕುತ್ತಾರೆಂದೂ ಕೂಡಾ ಆಕೆ ಎಣಿಸಿರಲಿಕ್ಕಿಲ್ಲ. (ಒಂದು ಸಂದರ್ಭದಲ್ಲಿ ಮೆಹತಾಬ್-ಒಬ್ಬ ಆರೋಪಿ, ಬಂಗಾಲಿಯವನು ಆಕೆಯ ಭಾಷಾಂತರ ನಿಖರವಾಗಿದ್ದು ಎಂಬುದನ್ನು ಒಪ್ಪಿಕೊಂಡಿದ್ದಾನೆ).

ಜೂನ್ 28ರಂದು ರೋಮಾ ಹಮೀದಾಳ ಜೊತೆ ಅತ್ಯಾಚಾರ ನಡೆದ ಸ್ಥಳದ ಗುರುತಿಸುವಿಕೆಗೆಂದು ಹೋದರು. ಹಮೀದಾ ಓಮ್ ಪ್ರಕಾಶರ ಮನೆ ಗುರುತಿಸಿದಳು. ಅತ್ಯಾಚಾರ ನಡೆದ ಕೊಠಡಿಯ ಕಡೆ ತೋರಿಸಿದಳು. ಆ ಕೊಠಡಿಯಲ್ಲಿರುವಾಗ ಅತ್ಯಾಚಾರದ ಬಗ್ಗೆಗಿನ ಎಲ್ಲಾ ವಿವರಗಳನ್ನೂ ಮತ್ತೆ ಆಕೆ ಹೇಳುವಂತೆ ಮಾಡಲಾಯಿತು. ಆನಂತರ ಆಕೆ ಶೋಧನಾಧಿಕಾರಿಗೆ ಎರಡೂ ಪೋಲೀಸ್ ಬೂತ್‌ಗಳನ್ನೂ ತೋರಿಸಿದಳು. ಇದಾದ ನಂತರ ಹಮೀದಾಳನ್ನು ನಿರ್ಮಲ್ ಛಾಯಾಕ್ಕೆ ವಾಪಸ್ಸು ಕಳಿಸಲಾಯಿತು. ಐದು ಪ್ರತ್ಯೇಕ 'ಐಡೆಂಟಿಟಿ ಪೆರೇಡ್'ಗಳು ತಿಹಾರ್ ಜೈಲಿನಲ್ಲ ನಡೆದವು. ಪ್ರತಿಯೊಂದರಲ್ಲೂ ಪ್ರತ್ಯೇಕ ಜಿಲ್ಲೆಗಳ 8 ಅಥವಾ ಹತ್ತು ಕಾಕಿ ಬಟ್ಟೆ ಧರಿಸಿದ ಪೋಲೀಸಿನವರಿದ್ದರು. ಹಮೀದ ಗುರುತಿಸಿದ ಐವರು ಪೋಲೀಸರೂ ಸಹ ನ್ಯೂ ಸೀಮಾಪುರಿಯಲ್ಲಿ ಈ ಘಟನೆ ನಡೆದಾಗ ಕರ್ತವ್ಯದಲ್ಲಿದ್ದವರು. ರೋಮಾ ಈ ಸಂದರ್ಭದಲ್ಲಿ ಅಲ್ಲಿ ಹಾಜರಿದ್ದರು. ಈ ಎಲ್ಲಾ ವಿಚಾರಗಳು ಗುಪ್ತವಾಗಿರಬೇಕಾದ್ದರಿಂದ ಈ ಕಾನೂನುಗಳ ವಿವರಗಳನ್ನು ಬಯಲು ಮಾಡದಿರುವುದಕ್ಕೆ ರೋಮಾಳಿಗೆ ಹೇಳಲಾಯಿತು. ಈ ಪೋಲೀಸರ ವಿರುದ್ಧ ಯಾವುದೇ ಕ್ರಮವನ್ನೂ ತೆಗೆದುಕೊಳ್ಳಲಿಲ್ಲ. ಭಾಷಾಂತರಕಾರರಿಗೆ ಹಾಗೂ ಸಾಕ್ಷಿಗಳಿಗೆ ಬೆದರಿಸಲು ಎಂಬಂತೆ ಇವರನ್ನು ಬಿಟ್ಟುಬಿಡಲಾಯಿತು.

ಪೋಲೀಸರನ್ನು ಬಂಧಿಸದಿರುವುದಕ್ಕೆ ಈ ಕೆಳಗಿನ ಕಾರಣಗಳನ್ನು ಕೊಡಲಾಯಿತು. ಓಮ್ ಪ್ರಕಾಶ್ ಹಾಗೂ ಮೆಹತಾಬ್‌ರವರನ್ನು ಪ್ರಥಮ ಬಾರಿಗೆ ಪೋಲೀಸ್ ವಶಕ್ಕೆ ತೆಗೆದುಕೊಂಡಾಗ ಅವರು ಐವರು ಹೆಸರುಗಳನ್ನು ಹೇಳಿದರು. ಸುಭಾಷ್, ದಾಮೋದರ್ ಸತೀಶ್ ಕುಮಾರ್, ಬೋಪಾಲ್‌ಸಿಂಗ್ ಮತ್ತು ಮೆಹಮೂದ್ ಖಾನ್. ತಿಹಾರ್ ಜೈಲಿನಲ್ಲಿ ಹಮೀದಾ ಗುರುತಿಸಿದ ಐವರುಗಳ ಹೆಸರು ಪೋಲಿಸರಿಗೆ ಹಾಗೂ ಮ್ಯಾಜಿಸ್ಟ್ರೇಟರಿಗೆ ಬಿಟ್ಟರೆ ಇನ್ನಾರಿಗೂ ಗೊತ್ತಿರಲಿಲ್ಲ. ಇವು ತೀರಾ ಗುಪ್ತ ವಿಚಾರಗಳೆಂದು ಕಾಯ್ದಿರಿಸಲ್ಪಟ್ಟಿದ್ದವು. ಹಾಗೂ ಸಾರ್ವಜನಿಕರಿಗೆ ಈ ವಿಚಾರ ತಿಳಿದಿರಲೇ ಇಲ್ಲ. ಹಮೀದಾ ಗುರುತಿಸಿದ ಐವರ ಮುಖಗಳೂ ಸಹ ರೋಮಾರವರಿಗೆ ತಿಳಿದಿರಲಿಲ್ಲ. ಆಕೆ ನ್ಯಾಯಾಧೀಶರ ಕಡೆ ನೋಡುವಂತೆ ಹಾಗೂ ಪೋಲೀಸರಿಗೆ ಬೆನ್ನು ತಿರುಗಿಸುವಂತೆ ಮಾಡಲಾಗಿತ್ತು. ಜನಸತ್ತದಲ್ಲಿನ ಸುದ್ದಿಯ ಪ್ರಕಾರ ಸುಭಾಷನನ್ನು ಮೊದಲನೇ 'ಐಡೆಂಟಿಟಿ ಪೆರೇಡ'ನಲ್ಲಿಯೇ ಹಮೀದಾ ಗುರುತಿಸಿದ್ದಳು. ಆ ಸಂದರ್ಭದಲ್ಲಿ ಶೋಧನಾಧಿಕಾರಿಗೆ ತಕ್ಷಣವೇ ಯಾವ ಅಧಿಕಾರಿಯನ್ನು ವಶಕ್ಕೆ ತೆಗೆದುಕೊಳ್ಳಬೇಕು ಎಂಬುದನ್ನು ಮ್ಯಾಜಿಸ್ಟ್ರೇಟರು ತಿಳಿಸಬೇಕಾಗಿತ್ತು. ಆದರೆ ಮ್ಯಾಜಿಸ್ಟ್ರೇಟರು ಹೇಳಿದ್ದು 45 ನಿಮಿಷದ ನಂತರ. ಪೋಲೀಸ್ ವ್ಯಾನ್‌ನಲ್ಲಿ ಪೆರೇಡ್‌ಗೆ ಬಂದಿದ್ದ ಪೋಲೀಸರೆಲ್ಲ ಹೊರಟು ಹೋದ ಮೇಲೆ ಹೇಳಿದ್ದರು. ಪೋಲೀಸ್ ವ್ಯಾನ್‌ನಲ್ಲಿ ಎಲ್ಲಾ ಪೋಲೀಸರನ್ನೂ ಸ್ಟೇಷನ್‌ಗೆ ವಾಪಸ್ಸು ಕರೆದುಕೊಂಡು ಹೋಗುತ್ತಿರುವಾಗ ತಿಹಾರ್ ಜೈಲಿನ ಪರಿಧಿ ದಾಟಿದ ಮೇಲೆ ಸುಭಾಷ್ ವ್ಯಾನ್‌ನಿಂದ ಇಳಿದು ಓಡಿಹೋದ. ಎರಡು ದಿನದ ನಂತರ ಲೋನಿ ಪ್ರದೇಶದಲ್ಲಿ ಆತನನ್ನು ಹಿಡಿದು ವಿಚಾರಣೆಗೆ ಕರೆತರಲಾಯಿತು. ಆ ಸಂದರ್ಭದಲ್ಲಿ ಅವನು ತನ್ನ ಇತರ ಕಲೀಗ್ಸ್ ಹೆಸರುಗಳನ್ನು ಕೊಟ್ಟನು. ಆದರೆ ಆತ ಕೊಟ್ಟ ಹೆಸರು ಓಮ್

ಪ್ರಕಾಶ್ ಹಾಗೂ ಮೆಹತಾಬ್ ಕೊಟ್ಟ ಹೆಸರುಗಳಾಗಿರಲಿಲ್ಲ. ಸುಭಾಷ್‌ನ ಸಾಕ್ಷಿ-ಪ್ರಮಾಣಗಳನ್ನು–ಓಮ್ ಪ್ರಕಾಶ್, ಮೆಹತಾಬ್ ಹಾಗೂ ಹಮೀದಾಳ ಸಾಕ್ಷಿ, ಪ್ರಮಾಣಗಳನ್ನು ಸಿಕ್ಕು ಸಿಕ್ಕಾಗಿಸಲು ಹಾಗೂ ಇತರರನ್ನು ಬಿಟ್ಟು ಬಿಡುವುದಕ್ಕಾಗಿ ಬಳಸಿಕೊಳ್ಳಲಾಯಿತು. ಆ ನಂತರದಲ್ಲಿ ಸುಭಾಷನನ್ನೂ ಸಹ ಬಿಡುಗಡೆಗೊಳಿಸಲಾಯಿತು. ಅವನನ್ನು ಯಾವ ಆಧಾರದ ಮೇಲೆ ಬಿಡುಗಡೆ ಮಾಡಲಾಯಿತು ಎಂಬುದು ಇನ್ನೂ ತಿಳಿದಿಲ್ಲ. ಹಮೀದಾ ಗುರುತಿಸಿದ ಐವರು ಪೋಲೀಸರೂ ಅಪರಾಧ ನಡೆದ ಸಮಯದಲ್ಲಿ ನ್ಯೂ ಸೀಮಾಪುರಿ ಸ್ಟೇಷನ್‌ನಲ್ಲಿ ಕರ್ತವ್ಯದಲ್ಲಿ ಹಾಜರಿದ್ದರು ಎಂಬ ಅಂಶವನ್ನು ಗಣನೆಗೇ ತಗೆದುಕೊಳ್ಳಲಿಲ್ಲ.

ಹಮೀದಾಳ ಹೇಳಿಕೆಗಳನ್ನು ದಾಖಲುಪಡಿಸಿಕೊಳ್ಳುವುದಕ್ಕೋಸ್ಕರವೇ ಎರಡು ವರ್ಷ ದಾಟಿದೆ ಎಂಬುದು ವಿಚಿತ್ರವಾಗಿ ಕಾಣುತ್ತದೆ. ಇದು ಇನ್ನೂ ಮುಗಿದಿಲ್ಲ. ಮಾರ್ಚ್ 21, 1995ರಲ್ಲಿ ಸುಸ್ತಾದ ಹಮೀದ ಅಡಿಶನಲ್ ಸೆಷನ್ಸ್ ನ್ಯಾಯಾಧೀಶ ಬಿ. ಎನ್. ಚೌಧರಿಯವರ ನ್ಯಾಯಾಲಯದ ಹಿಯರಿಂಗ್‌ನಲ್ಲಿ ಕಣ್ಣೀರಿಡುತ್ತಾ, ಅಳುತ್ತಾ ಹೇಳಿದಳು, "ಯಾಕೆ ಈ ಸಂಗತಿಗಳನ್ನೆಲ್ಲಾ ಕೇಳುತ್ತಿರಿ ? ನಾನು ಈ ಮೊದಲೇ ಈ ಸಂಗತಿಗಳನ್ನೆಲ್ಲ ನಿಮಗೆ ಹೇಳಿಲ್ಲವೇ ?". ಅನೇಕ ದಿನಪತ್ರಿಕೆಗಳು ಈ ವಿಚಾರವನ್ನು ಪ್ರಕಟಿಸಿದ ಮೇಲೆ ಹಾಗೂ ಮಹಿಳಾ ಸಂಘಟನೆಗಳಾದ ಜನವಾದಿ ಮಹಿಳಾ ಸಮಿತಿ, ಶಕ್ತಿ, ಅಂಕುರ್‌ನ ಸಮಾಜ ಸೇವಕಿ–ಶಾಂತಾ ದೇವಿ ಇವರು ಒಂಟಿಯಾಗಿ ಈ ಹೋರಾಟ ಮಾಡುತ್ತಿದ್ದ ರೋಮಾರಿಗೆ ಸಹಾಯಿಸಲು ಮುಂದೆ ಬಂದರು. ಈ ಕೇಸ್‌ನಲ್ಲಿ ಇದರಿಂದಾಗಿ ಸಾರ್ವಜನಿಕರಲ್ಲಿ ಆಸಕ್ತಿ ಹೆಚ್ಚಾಯಿತು. ತರುನ್‌ಜೋಸ್ 'ರಿಸೋರ್ಸ್ ಸ್ಕ್ಯಾನ್'ನಲ್ಲಿ ಈ ಕತೆಯನ್ನು ಮತ್ತೆ ಬೆಳಕಿಗೆ ತಂದರು. ಮತ್ತೊಬ್ಬ ಸ್ವತಂತ್ರ್ಯ ಪತ್ರಿಕೋದ್ಯಮಿ ತರನ್ ಕುಮಾರ್ ಬೋಸ್ ರೋಮಾರಿಗೆ ಸಹಾಯ ನೀಡಿದರು ಎಂ.ಪಿ. ಮಾಲಿನಿ ಭಟ್ಟಾಚಾರ್ಯ (C.P.I.M) ಲೋಕ ಸಭೆಯಲ್ಲಿ ಈ ವಿಚಾರವನ್ನು ಎತ್ತಿದರು ಮತ್ತು ಎಂ.ಪಿ. ಗುರುದಾಸ್‌ಗುಪ್ತ (C.P.I.) ಇವರೂ ಕೂಡಾ ಈ ವಿಚಾರವನ್ನು ಗೃಹಮಂತ್ರಿಗಳಿಗೆ ತೆಗೆದುಕೊಂಡು ಹೋಗುವಲ್ಲಿ ರೋಮಾರಿಗೆ ಸಹಾಯ ಮಾಡಿದರು.

ಎಸ್.ಬಿ. ಚವ್ಹಾಣ್-ಗೃಹ ಮಂತ್ರಿಗಳು, ಟೈಂಸ್ ಆಫ್ ಇಂಡಿಯಾದಲ್ಲಿ ಸುದ್ಧಿಯಾದ ಪ್ರಕಾರ ಹೀಗೆ ಹೇಳಿದರು, "ನಾನು ಆ ಹುಡುಗಿಗೆ ಮರುವಸತಿ ಕಲ್ಪಿಸುವುದಕ್ಕೆ ಹಾಗೂ ನ್ಯಾಯಾಂಗ ಆರೋಪಿಗಳನ್ನು ಜೈಲಿಗೆ ಕಳಿಸುವಂತೆ ಮಾಡಲು ಶಕ್ತಿ ಮೀರಿ ಪ್ರಯತ್ನಿಸುತ್ತೇನೆ."

ಅಷ್ಟೊಂದು ಅಧಿಕಾರಯುತ, ಗಣನೀಯ ವ್ಯಕ್ತಿಯ ಬಾಯಿಯಿಂದ ಈ ಮಾತು ಕೇಳಿಬಂದರೂ, ಆ ಮಾತುಗಳು ಬರಿಯ ಶಬ್ದಗಳಾಗಿ ಉಳಿದವು. ಹಮೀದಾಗೆ ನ್ಯಾಯಾಲಯ ಹಾಗೂ ನಿರ್ಮಲ ಛಾಯಾಕ್ಕೆ ತಿರುಗುವುದೇ ಕೆಲಸವಾಗಿ ಹೋಯಿತು. ಈ ನಡುವೆ ಆಕೆಗೆ ಟಿ. ಬಿ. ಆದ್ದರಿಂದ ಅಲ್ಲಿನ ಇತರ ನಿವಾಸಿಗಳು ಆಕೆಗೆ ಕಿರುಕುಳ ಕೊಡಲು ಆರಂಭಿಸಿದರು. ಆರೋಪಿಗಳು ಸ್ವತಂತ್ರ್ಯವಾಗಿ ಓಡಾಡಲಾರಂಭಿಸಿದರು. ಹಲವಾರು ನ್ಯಾಯಾಲಯದ ಕಾನೂನು ಕ್ರಮಗಳಲ್ಲಿ ಅತ್ಯಾಚಾರಿಗಳನ್ನು ರಕ್ಷಿಸಲು ಶ್ರೇಷ್ಠ ತಂತ್ರಗಳನ್ನು ಉಪಯೋಗಿಸತೊಡಗಿದರು. ಹಮೀದಾಳಿಗೆ ಅತ್ಯಾಚಾರವನ್ನು ಮತ್ತೆ ಮತ್ತೆ ವಿವರಿಸಲು ಕೇಳಲಾಯಿತು. **ದೀಪಗಳಿದ್ದವೋ ಇಲ್ಲವೋ ? ಆಕೆಯನ್ನು ನೆಲದ ಮೇಲೆ ಮಲಗಿಸಲಾಗಿತ್ತೇ ? ಆಕೆಗೆ ಅತ್ಯಾಚಾರ ಎಂದರೆ ಏನೆಂದು ಗೊತ್ತೇ ?** ಆಕೆಗೆ ಮತ್ತೆ ಮತ್ತೆ ಭಯಂಕರ ಅಪರಾಧವನ್ನು ಬಿಚ್ಚಿ ಹೇಳುವಂತೆ ಮಾಡಲಾಯಿತು. ಈ ಮೂಲಕ ಆಕೆಯನ್ನು ನೀತಿಗೆಡಿಸುವುದು, ಮಾನಸಿಕವಾಗಿ ರೋಗಗ್ರಸ್ತೆಯನ್ನಾಗಿ ಮಾಡಲಾಯಿತು. ಸ್ವಲ್ಪ ಸ್ವಲ್ಪವಾಗಿ ಆಕೆ ನಶಿಸುತ್ತಾ ಬಂದಳು. ಕಾನೂನು ತಮ್ಮನ್ನು ರಕ್ಷಿಸುತ್ತದೆ ಹಾಗೂ ತಮ್ಮ ಪರವಾಗಿ ಎಲ್ಲ ಇರುತ್ತದೆ ಎನ್ನುವ ಜ್ಞಾನದಲ್ಲಿ ಅಪರಾಧಿಗಳು ಬೀಗುತ್ತಾ ಹೋದರು. ಹಮೀದಾ ನ್ಯಾಯಾಲಯದಲ್ಲಿ ಹತಾಶಳಾಗಿ ಎದೆಯೊಡೆದುಕೊಂಡ ಘಟನೆಯ ನಂತರದಲ್ಲಿ 'ಇನ್ ಕ್ಯಾಮರಾ' ಕ್ರಮಕ್ಕಾಗಿ ಒತ್ತಾಯಿಸಲಾಯಿತು. ಅದೂ ಕೂಡಾ ಅವಳಿಗೆ ಅನೂಕಲಕರವಾಗಲಿಲ್ಲ. ಯಾಕೆಂದರೆ ಆಕೆಯ ಬಗ್ಗೆ ಕಾಳಜಿ ಇರುವವರು ಈ 'ಪ್ರೊಸೀಡಿಂಗ್'ಗೆ ಹಾಜರಾಗಲು ಅನುಮತಿ ಇರಲಿಲ್ಲ. ಹತ್ತು ವರ್ಷದ ಹಮೀದಾಳಿಗೆ ಅತ್ಯಾಚಾರ ಅಥವಾ ಗೌರವ ಚ್ಯುತಿಯ ಪರಿಣಾಮಗಳು ಸಂಪೂರ್ಣವಾಗಿ ಅರ್ಥವಾಗಿರಲಿಲ್ಲ. ಆಕೆಗೆ ನೋವಾಗಿರುವುದನ್ನು

ಹಾಗೂ ಅಪಮಾನಕ್ಕೊಳಗಾಗಿರುವುದನ್ನು ಮಾತ್ರ ಆಕೆ ವಿರೋಧಿಸತೊಡಗಿದ್ದಳು.

ಈ ಕೆಳಗಿನ ವಿಚಾರಗಳನ್ನು ಗಮನಿಸಬೇಕು. ಅಡಿಷನಲ್ ಪಬ್ಲಿಕ್ ಪ್ರಾಸಿಕ್ಯೂಟರ್-ಹಮೀದಾಳ ವಕೀಲರು. ಇವರು ನಿರಂತರವಾಗಿ ಎಂಟು ಹಿಯರಿಂಗ್‌ಗಳಿಗೆ ಹಾಜರಾಗಲಿಲ್ಲ. ಈ ಎಂಟು ದಿನಗಳೂ ರೋಮಾ ತಮ್ಮ ಕೆಲಸದಿಂದ ರಜೆ ತೆಗೆದುಕೊಂಡು ಹಾಗೂ ಕುಟುಂಬವನ್ನು ನಿರ್ಲಕ್ಷಿಸಿ ನ್ಯಾಯಾಲಯಕ್ಕೆ ಹಾಜರಾಗಬೇಕಾಯಿತು. ಸಾಕ್ಷಿಗಳಾದ ಶಮೀಮ್ ಮತ್ತು ರಾಜು ತಮ್ಮ ದಿನ ನಿತ್ಯದ ಗಳಿಕೆಯನ್ನು ಬಿಟ್ಟು ಹಾಜರಾಗಬೇಕಾಯಿತು. ಅಡಿಷನಲ್ ಪಬ್ಲಿಕ್ ಪ್ರಾಸಿಕ್ಯೂಟರ್-ಹಮೀದಾಳ ವಕೀಲರು ಆಕೆಯೊಡನೆ ಮಾತಾಡುವ ಪ್ರಯತ್ನವನ್ನೇ ಮಾಡಲಿಲ್ಲ. ಏಕೆಂದರೆ ಅವರಿಗೆ ಬೆಂಗಾಲಿ ಭಾಷೆ ಗೊತ್ತಿರಲಿಲ್ಲ. ಆಕೆಯನ್ನು ಪ್ರಭಾವಪೂರ್ಣವಾಗಿ ಆತ ಹೇಗೆ ಪ್ರತಿನಿಧಿಸಬಲ್ಲ ? ಅವರ ಕೈಯಲ್ಲಿ ಸಾಕ್ಷಿಗಳಿದ್ದರೂ ಪ್ರತಿರೋಧಿ ವಕೀಲರ ವಿರುದ್ಧ ಸ್ಪಷ್ಟ ನಿಲುವು ತೆಗೆದುಕೊಳ್ಳಲಿಕ್ಕೆ ಅವರ ಕೈಯಲ್ಲಿ ಸಾಧ್ಯವಾಗುತ್ತಿಲ್ಲ.

ಹಮೀದಾಗೆ ಅವಳ ಆಯ್ಕೆಯ ವಕೀಲರನ್ನು ಹೊಂದಲು ಸಾಧ್ಯವಿಲ್ಲ. ಏಕೆಂದರೆ ಆಕೆ ಮೈನರ್, ಪೋಷಕರಿಲ್ಲದಾಕೆ ಹಾಗೂ ಅನಕ್ಷರಸ್ಥೆ. ಹಾಗಾಗಿ ವಕಾಲತ್‌ನಾಮ್‌ಗೆ ಆಕೆ ಸಹಿ ಹಾಕುವ ಹಾಗೆ ಇರಲಿಲ್ಲ. ಬಾಂಗ್ಲಾದೇಶದ ಹೈಕಮಿಷನ್ ಪ್ರಥಮದಲ್ಲಿ ಆಕೆ ಬಾಂಗ್ಲಾದೇಶದ ನಾಗರೀಕಳು ಎಂಬುದನ್ನು ಒಪ್ಪಿಕೊಳ್ಳಲೂ ಇಲ್ಲ, ಹಾಗೂ ಆಕೆಗೆ ಸಹಾಯವನ್ನೂ ಮಾಡಲಿಲ್ಲ. ಆದರೆ ಎರಡು ವರ್ಷದ ನಂತರ ಬಾಂಗ್ಲಾದೇಶದ ಸುಪ್ರೀಂ ಕೋರ್ಟ್ ವಕೀಲರಾದ ಮಿಸ್ ಸೀಮಾ ಜಾಹೂರ್ ದೆಹಲಿಗೆ ಬಂದಿದ್ದಾಗ ನ್ಯಾಯಾಧೀಶರ ವಿಶೇಷ ಅನುಮತಿಯಿಂದ ಹಮೀದಾಳನ್ನು ನಿರ್ಮಲ್ ಛಾಯಾದಲ್ಲಿ ಭೇಟಿಯಾಗಿದ್ದರು. ಆಕೆ ಬಾಂಗ್ಲಾದೇಶಕ್ಕೆ ಹಿಂತಿರುಗಿದ ಮೇಲೆ ಬಾಂಗ್ಲಾದೇಶದ ರಾಷ್ಟ್ರೀಯ ಮಹಿಳಾ ವಕೀಲರ ಸಂಘದಿಂದ ಸತ್ಯವನ್ನು ಪ್ರಕಟಿಸಿದರು.

### ಯಾರು ಅಪರಾಧಿಗಳು ?

ಹಮೀದಾಳ ಸೆರೆಮನೆರೀತಿಯ ವಾಸದಿಂದಾಗಿ ನಿರ್ಮಲ್ ಛಾಯಾದಲ್ಲಿ ಇಂಡಿಯನ್ ಪೀನಲ್ ಕೋಡ್ ಖೈದಿಗಳಿಗೆ ನೀಡುವ ಮೂಲಭೂತ ಸವಲತ್ತುಗಳನ್ನೂ ಕೂಡಾ ಆಕೆ ಪಡೆಯಲಿಲ್ಲ. ಆಕೆ ಯಾರನ್ನೂ ಭೇಟಿಯಾಗುವಂತಿರಲಿಲ್ಲ. ಆಕೆಯೊಡನೆ ಮಾತನಾಡಬಲ್ಲ ಹಾಗೂ ಆಕೆಗೆ ನೈತಿಕ ಭರವಸೆ ನೀಡಿದ ರೋಮಾರವರನ್ನು ಕೂಡಾ ಅವಳು ಭೇಟಿಯಾಗುವಂತಿರಲಿಲ್ಲ. ರೋಮ ಆಕೆಯನ್ನು ಪ್ರಭಾವ ಮಾಡಿಬಿಡಬಹುದೆಂಬ ಕಾರಣದಿಂದ ಹಮೀದಾಳನ್ನು ಭೇಟಿಯಾಗಲು ಬಿಡುತ್ತಿಲ್ಲ.

ಹಮೀದಾ ನಿರ್ಮಲ್ ಛಾಯಾದಲ್ಲಿ ಯಾವುದೇ ರೀತಿಯ ಶಿಕ್ಷಣವನ್ನಾಗಲೀ ಅಥವಾ ಯೋಗ್ಯವಾದ ನೈಪುಣ್ಯತೆಗಳನ್ನಾಗಲೀ ಪಡೆಯಲಿಲ್ಲ. ಓದುವುದನ್ನಾಗಲೀ, ಬರೆಯುವುದನ್ನಾಗಲೀ ಅಥವಾ ಹಿಂದೀ ಭಾಷೆಯಲ್ಲಿ ಸರಿಯಾಗಿ ಮಾತನಾಡುವುದನ್ನಾಗಲೀ ಕಲಿಯಲಿಲ್ಲ. ಆಕೆಯನ್ನು ಯಾವಾಗಲೂ ಬೀಗಹಾಕಿ ಕೂಡಿಡುತ್ತಿದ್ದರು. ಆಕೆ ಯಾವ ರೀತಿಯಲ್ಲೂ ಯಾರನ್ನು ಸಂಪರ್ಕಿಸಲೂ ಸಾಧ್ಯವಿರಲಿಲ್ಲ. ಆಕೆ ಹಿಯರಿಂಗ್‌ಗೆ ಬಂದಾಗ ನ್ಯಾಯಾಲಯದ ಕಸ್ಟಡಿಯಲ್ಲಿ ಕೂಡಿಡಲ್ಪಡುತ್ತಿದ್ದಳು (ಇತರೇ ಅಪರಾಧಿಗಳಂತೆ). ಹಲವಾರು ದಿನಪತ್ರಿಕೆಗಳು ಪ್ರಕಟಿಸಿದಂತೆ 1993 ರಲ್ಲಿ ಹಮೀದಾಳನ್ನು ನಿರ್ಮಲ್ ಛಾಯಾಕ್ಕೆ ಮೊದಲಬಾರಿಗೆ ಸೇರಿಸಿದಾಗ ಇತರರು ಆಕೆಯನ್ನು ಲೈಂಗಿಕವಾಗಿ ಬಯ್ದುದೂ ಅಲ್ಲದೇ ಆಕೆಯನ್ನು ಹೊಡೆದು ಹೆದರಿಸಿದ್ದರು. ರೋಮ ಹಮೀದಾಳನ್ನು ಮನೆಯಲ್ಲಿ ಭೇಟಿಯಾಗುವುದನ್ನು ನ್ಯಾಯಾಲಯ ನಿಷೇಧಿಸುವ ಮೊದಲು ಹಮೀದಾ ಆಕೆಯಲ್ಲಿ ಹೇಳಿದ್ದಳು, **"ಎಲ್ಲಿಗೆ ನನ್ನನ್ನು ಕಳುಹಿಸಿದ್ದೀರಿ ಬುವಾ ? ಪ್ರತಿದಿನ ರಾತ್ರಿ ಆ ಗಂಡಸರು ಮಾಡಿದ್ದನ್ನೇ ದೊಡ್ಡ ಹುಡುಗಿಯರು ನನಗೆ ಮಾಡುತ್ತಾರೆ. ಆ ಪೋಲೀಸರು ನನಗೇನು ಮಾಡಿದರು ಎಂಬುದನ್ನು ಅವರು ನನ್ನನ್ನು ಕೇಳುತ್ತಲೇ ಇರುತ್ತಾರೆ."**

ಇದೆಲ್ಲ ಸಾಲದೆಂಬಂತೆ-ರೋಮ ಈ ಪ್ರಕರಣದಲ್ಲಿ ವಿಶೇಷ ಆಸಕ್ತಿ ವಹಿಸಿದ್ದಾರೆಂಬ ಆರೋಪವನ್ನು ನ್ಯಾಯಾಧೀಶರು ಮಾಡಿದ್ದಾರೆ. ಈ ವರ್ಷದ ಏಪ್ರಿಲ್‌ನಲ್ಲಿ ನಡೆದ ಘಟನೆಯೊಂದು ಇದಕ್ಕೆ ಕಾರಣವಾಗಿದೆ. ಎರಡು ಭಿನ್ನ ಸಂದರ್ಭದಲ್ಲಿ ಅಪರಾಧಿಗಳ ಬೆಂಬಲಿಗರು ರೋಮಾಳ ಮೇಲೆ ದೈಹಿಕ

ವಾಗಿ ಆಕ್ರಮಣ ನಡಿಸಿದರು. ಮೊದಲನೆಯದು ಏಪ್ರಿಲ್ 21, 1995 ರಂದು ಕೋರ್ಟಿನ ಸಮ್ಮುಖ ದಲ್ಲಿಯೇ ನಡೆಯಿತು. ಆಗ ಪ್ರೊಸೀಡಿಂಗ್ಸ್‌ಅನ್ನು ಇನ್ನೂ ಇನ್-ಕ್ಯಾಮರಾಕ್ಕೆ ಬದಲಾಯಿಸಿರಲಿಲ್ಲ. ಹಮೀದ ನ್ಯಾಯಾಧೀಶರಿಗೆ ಆಕ್ರಮಣಕಾರಿಗಳನ್ನು ಕೈ ಮಾಡಿ ತೋರಿಸಿದಳು. ರೋಮಾ ಹಮೀದಾಳ ಮಾತುಗಳನ್ನು ಭಾಷಾಂತರಿಸುತ್ತಿದ್ದಾಗ ಒಂದು ಆಕ್ರಮಣಕಾರಿ ಗುಂಪು ರೋಮಾರ ಮೇಲೆ ನುಗ್ಗಿತು. ಆಕೆ ಹಮೀದಾಳನ್ನು ರಕ್ಷಿಸುವುದಕ್ಕೆ ಬೆನ್ನು ತಿರುಗಿಸಿ ನಿಂತರು. ಹಮೀದಾ ಹೆದರಿಕೆಯಿಂದ ರೋಮಾರನ್ನು ಗಟ್ಟಿಯಾಗಿ ಹಿಡಿದು ಕೊಂಡಿದ್ದಳು. ಒಬ್ಬ ಆಕ್ರಮಣಕಾರಿ ರೋಮರ ಹಿಂದೆ ಯಾವುದೋ ಉಪಕರಣದಿಂದ ಕತ್ತರಿಸಿಬಿಡುವು ದಾಗಿ ತೋರಿಸಿದ. ಇಡಿಯ ನ್ಯಾಯಾಲಯವನ್ನು ನ್ಯಾಯಾಧೀಶರು ಕ್ಲಿಯರ್ ಮಾಡುವುದರೊಳಗೆ ರೋಮ ಆ ಹುಡುಗಿಯ ಸುತ್ತ ತಮ್ಮ ಕೈಗಳನ್ನು ಈ ಸಂದರ್ಭದಲ್ಲಿ ಹಾಕಿದ್ದರು. ಹೀಗೆ ಕೈ ಹಾಕಿದ್ದರಿಂದಲೇ ಆಕೆಗೆ ಹಮೀದಾಳ ಬಗ್ಗೆ ವಿಶೇಷ ಆಸಕ್ತಿ ಇದೆ ಎಂಬುದು ಹಾಗೂ ಭಾಷಾಂತರಕಾರಳಾಗುವುದಕ್ಕೆ ಸಮರ್ಥಳಲ್ಲ ಎಂಬುದನ್ನು ನಿರ್ಧರಿಸುವ ಅಂಶವಾಗಿದೆ. **ಹಮೀದಾ ಳಿಗ ಭರಿಸಲಾಗದಂತಹ ಅಪಾಯಗಳನ್ನು ಉಂಟು ಮಾಡಿದ ಜನರಿಂದ ಭಯಪಡಿಸಲ್ಪಟ್ಟಾಗ ಯಾವನೇ/ಳೇ ಸೌಜನ್ಯಯುತ, ಮಾನವೀಯ ವ್ಯಕ್ತಿ ದೈಹಿಕ ಆಕ್ರಮಣದಿಂದಾಗಿ ಮಾನಸಿಕವಾಗಿ ರೋಗಗ್ರಸ್ತಗೊಂಡ ಮಗುವಿನ ಬಗ್ಗೆ ತೋರಿಸಬಹು ದಾದ ವರ್ತನೆಯಿಂದ ಆಕೆ ತಪ್ಪಿತಸ್ಥರಾಗಿದ್ದಾರೆ.** ಭಯಂಕರವಾಗಿ ಹೆದರಿದ ಹುಡುಗಿ ಅತ್ಯಾಚಾರಿಗಳನ್ನು ಎದುರಿಸುವಾಗ ರೋಮಾರನ್ನು ಅಪ್ಪಿಕೊಂಡಳು ಎಂಬುದನ್ನು ರೋಮಾರ ವಿರುದ್ಧವೇ ಬಳಸಲಾಗಿದೆ. ಆಕೆ ಹಮೀದಾಳ ಮೇಲೆ ಪ್ರಭಾವ ಬೀರುತ್ತಿದ್ದಾರೆ ಎಂದು ಹೇಳಲಾಗಿದೆ. 1995, ಮೇ 4 ರಂದು ಮ್ಯಾಜಿಸ್ಟ್ರೇಟ್ ಚತುರ್ವೇದಿ ಬಿ.ಎನ್ ಇವರು ರೋಮಾ ರವರನ್ನು ಈ ಕೇಸಿನಿಂದ ತೆಗೆದು ಹಾಕಿದರು. ಈ ಆಪಾದನೆಗಳಿಗೆಲ್ಲ ಕಾರಣವೆಂದರೆ–ಡಿಫೆನ್ಸ್ ಲಾಯರ್‌ರ ಪ್ರಕಾರ ರೋಮಾ, ಹಮೀದಾಳ ಇಡಿಯ ಪ್ರಕರಣ ವನ್ನು ಬಯಲಿಗೆಳೆದ ಕುಮಾರ್ ಸಂಜಯ್‌ಸಿಂಗ್ ಸೋದರಿ. ಆದುದರಿಂದ ಆಕೆಗೆ ಹಮೀದಾಳಲ್ಲಿ ಆಸಕ್ತಿ ಇದೆ. (ಕುಮಾರ್ ಸಂಜಯ್‌ಸಿಂಗ್ ಜನಸತ್ತದಲ್ಲಿ ಈ ಪ್ರಕರಣ ಬಯಲಿಗೆಳೆದ ಮೇಲೆ ಆತನ ಜೀವಕ್ಕೆ ಬೆದರಿಸ ಲಾಗಿದೆ). ನ್ಯಾಯಾಧೀಶ ಚತುರ್ವೇದಿ ರೋಮಾರವ ರನ್ನ ನೇರವಾಗಿ ಕೇಳಿದರು-ಆಕೆ ಕುಮಾರ್ ಸಂಜಯ್ ಸಿಂಗ್‌ರವರ ಸೋದರಿಯೇ ಎಂದು ! ಆಕೆ ಹೇಳಿದರು: 'ನಾನು ಬೆಂಗಾಲಿ, ಆತ ಬಿಹಾರಿ, ನಾನ್ಹೇಗೆ ಆತನ ಸೋದರಿಯಾಗಬಲ್ಲೆ?". ಆತ ಮತ್ತೆ ಕೇಳಿದರು "ಯಾವುದೇ ರೀತಿಯಲ್ಲಿ ಆತ ಸಂಬಂಧಿಯಾಗಬೇಕೇ ?". ರೋಮ ಆತನನ್ನೂ ಮೊದಲಬಾರಿಗೆ ನ್ಯಾಯಾಲಯ ದಲ್ಲಿ ನೋಡಿದುದಾಗಿ ಹೇಳಿ ಬಲವಾಗಿ ಇದನ್ನು ತಿರಸ್ಕರಿಸಿದರು. ನ್ಯಾಯಾಧೀಶರು ಡಿಫೆನ್ಸ್ ಲಾಯರ್ ಕಡೆಗೆ ತಿರುಗಿ ಎಲ್ಲಿಂದ ಈ ವಿಚಾರ ಪಡೆದಿರಿ ಎಂದು ಕೇಳಿದಾಗ ವಕೀಲರು ತಮ್ಮ ಕೈಗಳನ್ನು ಮಡಚಿದರು. ಕೆಳಗೆ ನೋಡುತ್ತಾ ಉತ್ತರಿಸದೇ ಸುಮ್ಮನಾದರು. ರೋಮಾ ಹೆಂಗಸು ಹಾಗೂ ಬೆಂಗಾಲಿ ಆದ್ದರಿಂದ ಹುಡುಗಿಯ ಬಗ್ಗೆ ಕರುಣೆ ಹೊಂದಿದ್ದಾರೆ. ಡಿಫೆನ್ಸ್ ಲಾಯರ್ ಪ್ರಕಾರ ರೋಮಾರ ಕೆಲಸವೆಂದರೆ ಆ ಹುಡುಗಿಯ ಸಾಕ್ಷಿ, ಪ್ರಮಾಣಗಳನ್ನು ಭಾಷಾಂತರಿಸ ಬೇಕೇ ಹೊರತು ಆಕೆಗೆ ನೈತಿಕ ಬೆಂಬಲ ನೀಡುವುದಲ್ಲ, ರೋಮ ಹಮೀದಾಳನ್ನು ಅಪರಾಧಿಗಳ ವಿರುದ್ಧ ಪ್ರಭಾವಿಸುವುದಕ್ಕೋಸ್ಕರವೇ ಆಕೆಯನ್ನು ನಿರ್ಮಲ್ ಛಾಯಾದಲ್ಲಿ ಭೇಟಿಯಾಗಿದ್ದರು ಎಂಬುದು.

ದೆಹಲಿಯಲ್ಲಿರುವ ಜನವಾದಿ ಮಹಿಳಾ ಸಂಸ್ಥೆ ಹಮೀದಾಳಿಗೆ ವಕೀಲರನ್ನು ನೇಮಕ ಮಾಡಲು ಹಾಗೂ ಕಾರಾಗೃಹದಲ್ಲಿದ್ದ ಹುಡುಗಿಯನ್ನು ಸಂಪರ್ಕಿಸಲು ಪೆಟಿಷನ್ ಹಾಕಿತು. ಆದರೆ ಆ ಪೆಟಿಷನ್ನನ್ನು ತಿರಸ್ಕರಿಸ ಲಾಯಿತು. ಆಕೆಯ ಅಗತ್ಯಗಳನ್ನೆಲ್ಲ ಪೂರೈಸಲಾಗಿದೆ ಎಂದು ಹೇಳಲಾಯಿತು. ಹಮೀದಾ ಲಾಯರ್ ಪಬ್ಲಿಕ್ ಪ್ರಾಸಿಕ್ಯೂಟರ್ ವಿಂಟು ಹಿಯರಿಂಗ್‌ಗಳಿಗೆ ಬರದೇ ಇದ್ದಾಗಲೂ ಹಾಗೂ ನ್ಯಾಯಾಲಯದಲ್ಲಿ ಹಿಮ್ಮುಖದಲ್ಲಿ ಈ ಕೇಸ್ ನಡೆಯುತ್ತಿದ್ದಾಗಲೂ ಸಹ ಹೀಗೆ ಹೇಳ ಲಾಯಿತು.

ನ್ಯಾಯಾಲಯ ಆರೋಪಿಗಳ ಹಕ್ಕನ್ನು ರಕ್ಷಿಸಬೇಕು ಎನ್ನುತ್ತದೆ. ತಮಾಷೆ ಎಂದರೆ ಬಲಿಯಾದವರ ಹಕ್ಕುಗಳ ಪ್ರಶ್ನೆ ಎಲ್ಲಿಯೂ ಬರುವುದೇ ಇಲ್ಲ. ಪೋಷಣೆ ಇಲ್ಲದ ಹಮೀದಾಗೆ ಆಹಾರ ಕೊಡುವುದಕ್ಕೆ ರೋಮ ವಿಶೇಷ

ಅನುಮತಿಯನ್ನು ಪಡೆಯಬೇಕಾಯಿತು. ಈ ಎರಡು ವರ್ಷದ ಅವಧಿಯಲ್ಲಿ ಹಮೀದಾಳಲ್ಲಿ ಮುಂಚೆ ಇರದ ಟಿ.ಬಿ., ಮಾನಸಿಕ ರೋಗಕ್ಕೆ ಸಂಬಂಧಪಟ್ಟ (reizures) ತೀಕ್ಷ್ಣವಾಯುಗಳು ಕಾಣಸಿಕೊಳ್ಳಲಾರಂಭಿಸಿದವು.

ಹಮೀದಾಳ ಉಗ್ರಪರೀಕ್ಷೆಯ ಓದಿದ ಜನವಾದಿ ಮಹಿಳಾ ಸಮಿತಿ ಈ ಅತ್ಯಾಚಾರದ ಪ್ರಕರಣವನ್ನು ಇನ್-ಕ್ಯಾಮರಾದಲ್ಲಿ ನಡೆಯಬೇಕೆಂದು ಒತ್ತಾಯಿಸಿದರು. ಇನ್-ಕ್ಯಾಮರಾ ಪ್ರೋಸೀಡಿಂಗ್ಸ್ ಅತ್ಯಾಚಾರಕ್ಕೊಳಗಾದವರಿಗೆ ನೆರವಾಗಬೇಕು, ಅವಮಾನಕರ ವಿವರಣೆಯನ್ನು ಇಡಿಯ ನ್ಯಾಯಾಲಯದ ಮುಂದೆ ಹೇಳುವಂತಹ ಅವಮಾನದಿಂದ ಅವರನ್ನು ಬಿಡುಗಡೆಗೊಳಿಸಬೇಕು. ಆದರೆ ಹಮೀದಾಳ ಪ್ರಕರಣದಲ್ಲಿ ಇದು ಅವಳಿಗೆ ಪ್ರತಿಕೂಲವಾಗಿತ್ತು. ಇಲ್ಲಿ ಆಕೆಯ ಸಂದರ್ಭವನ್ನು ಎಣಿಕೆಗೇ ತೆಗೆದುಕೊಂಡಿರಲಿಲ್ಲ. ಈ ಕೇಸ್‌ನಲ್ಲಿ ಇರುವುದು ಭಾಷೆಯ ಮೇಲೆ ಹಿಡಿತವಿರದ ಒಂದು ಚಿಕ್ಕ ಹುಡುಗಿ. ಆಕೆಯಲ್ಲಿ ಆಸಕ್ತಿ ತೋರಿಸಬಲ್ಲ ಪೋಷಕರು ಇಲ್ಲ. ಇನ್-ಕ್ಯಾಮರ ಪ್ರೋಸೀಡಿಂಗ್‌ನಲ್ಲಿ ಆಕೆ ಆಕ್ರಮಣಕಾರಿಗಳನ್ನು ಹತ್ತಿರದಿಂದ ನೋಡಬೇಕಾಗುತ್ತದೆ. ಆಕೆಗೆ ಅವರು ಭಯಾನಕತೆಯ ಸಂಕೇತಗಳು. ಯಾರ ಬೆಂಬಲವೂ ಇಲ್ಲದೇ ಡಿಫೆನ್ಸ್ ಲಾಯರ್‌ನ ಬಯ್ಯುವ ತಂತ್ರಗಳಿಗೆ ಆಕೆಯನ್ನು ಒಳಗಾಗಿಸುವುದಾಗಿತ್ತು. ಈ ರೀತಿಯ ಬೇಡಿಕೆ ಇಡುವ ಮೊದಲು ಹಮೀದಾಳ ಪ್ರಕರಣವನ್ನು ಹತ್ತಿರದಿಂದ ನೋಡಬೇಕಾಗುತ್ತದೆ. ಏಕೆಂದರೆ ಆರೋಪಿಗಳು ಡೆಲ್ಲಿಯ ಪೋಲಿಸಿನ ಸದಸ್ಯರು. ಯಾವುದೇ ಕೊಳಕಿಲ್ಲದೇ ನ್ಯಾಯ ಕೊಡಲ್ಪಡುತ್ತದೆ ಎಂಬುದನ್ನು ಜಾಗರೂಕವಾಗಿ ಕಾಯಲು ಇದೇ ಒಂದು ಕೆಂಪು ಚಿಹ್ನೆಯಾಗಬೇಕು. ಶೋಧನಾಧಿಕಾರಿ ಕೂಡಾ ಡೆಲ್ಲಿಯ ಪೋಲೀಸ್ ಸದಸ್ಯರು. ಎಂಟು ಹಿಯರಿಂಗ್‌ಗಳಿಗೆ ಬರದೇ ಇರುವ ಮೂಲಕ ಹಮೀದಾಳ ಲಾಯರ್ ಈ ಕೇಸ್‌ನಲ್ಲಿ ನಿರುತ್ಸಾಹ ತೋರಿಸಿದ್ದಾರೆ. ನ್ಯಾಯಾಧೀಶರು ಕೂಡಾ ಆರೋಪಿಗಳ ಬಗ್ಗೆ ತೋರುವ ಒಲವನ್ನು ಅತ್ಯಾಚಾರಕ್ಕೊಳಗಾದವಳ ಬಗ್ಗೆ ತೋರಿಸುತ್ತಿಲ್ಲ. ಮುಕ್ತವಾಗಿರದ 'ಇನ್ ಕ್ಯಾಮೆರಾ'ದ ಇನ್ನೊಂದು ಸಮಸ್ಯೆ ಎಂದರೆ ಸಾರ್ವಜನಿಕರಿಗೆ ನಡೆದಿರುವ ಘಟನೆಯ ವಿವರಗಳು ಸಿಕ್ಕುವುದಿಲ್ಲ. ಜೊತೆಗೆ ಸ್ವತಂತ್ರ ಮಾನವೀಯ ಹಕ್ಕುಗಳ ಸಂಸ್ಥೆಗಳು ಅಲ್ಲಿ ಹಾಜರಾಗಲು ಅವಕಾಶವಿಲ್ಲದ ಕಾರಣ ಅಲ್ಲಿ ಯಾವ ರೀತಿಯ ಕೊಳಕು ನಡೆಯುವುದಿಲ್ಲವೆಂದು ಹೇಳುವುದಕ್ಕೆ ಆಗುವುದಿಲ್ಲ.

ಆಗಾಗ್ಗೆ ಮುಂದೂಡಲ್ಪಡುವ, ಬದಲಾಯಿಸಲ್ಪಡುವ ಪ್ರೊಸೀಡಿಂಗ್ಸ್‌ಗಳಿಂದ ಭಾಷಾಂತರಕಾರರಿಗೆ ಹಾಗೂ ಸಾಕ್ಷಿಗಳಿಗೆ ಸಾಕಷ್ಟು ತೊಂದರೆಯಾಗಿದೆ. ಈ ಉಗ್ರ ಪರೀಕ್ಷೆ ಹಮೀದಾಳಿಗೆ ಇನ್ನೂ ಭೀಕರವಾದುದು. ಎರಡು ವರ್ಷ ಈ ಕೇಸನ್ನು ತಳ್ಳಿರುವುದರಿಂದ ಹಮೀದಾಳಿಗೆ ಗೊಂದಲ ಉಂಟಾಗಿರುವುದಲ್ಲದೇ ಅವಳು ಘಟನೆಗಳನ್ನು ನೆನಪಿಸಿಕೊಳ್ಳುವುದೂ ಸಹ ಮಸುಕಾಗಿದೆ. ಕೆಲವು ಸಂದರ್ಭದಲ್ಲಿ ಸಾಕ್ಷಿದಾರರು ಹಾಗೂ ಭಾಷಾಂತರಕಾರರನ್ನು ಹಿಯರಿಂಗ್ಸ್ ಸಂದರ್ಭದಲ್ಲಿ ದಾರಿತಪ್ಪಿಸುವುದರ ಮೂಲಕ ಅವರು ಹಾಜರಾಗದಂತೆ ಮಾಡಲಾಗಿದೆ. 1994ರಲ್ಲಿ ನಡೆದ ಹಲವಾರು ಟ್ರಯಲ್‌ಗಳಲ್ಲಿ ಐವರೂ ಪೋಲೀಸಿನವರನ್ನೂ ಬಿಡುಗಡೆಗೊಳಿಸಲಾಗಿದೆ. ರೋಮ ಆ ಸಂದರ್ಭದಲ್ಲಿ ಅಧಿಕೃತ ಭಾಷಾಂತರಕಾರರಾಗಿದ್ದಾಗೂ ಸಹ ಅವರಿಗೆ ಈ ಬಗ್ಗೆ ತಿಳಿಸಲೇ ಇಲ್ಲ. ಹಮೀದ ಆ ಹಿಯರಿಂಗ್ಸ್‌ಗಳಿಗೆ ಯಾಕೆ ಭಾಷಾಂತರಿಸುವುದಕ್ಕೆ ಬರಲಿಲ್ಲ ಎಂದು ಕೇಳಿದಾಗಲೇ ರೋಮಾರಿಗೆ ಈ ಬಗ್ಗೆ ಗೊತ್ತಾದುದು. ನಾನು ಹಾಜರಿದ್ದ ಎರಡು ಹಿಯರಿಂಗ್ಸ್‌ನಲ್ಲೂ ಆರೋಪಿಗಳನ್ನು ಹಾಜರುಪಡಿಸಲಾಗಿತ್ತು. ಅವರಲ್ಲಿ ದುರಂಹಕಾರ ಹಾಗೂ ಭರವಸೆ ಎದ್ದು ಕಾಣುತ್ತಿತ್ತು. ಅವರು ಜೈಲಿನಲ್ಲಿ ಸಿಗುತ್ತಿದ್ದ ಅಕ್ಕಿ-ಗಂಜಿಯ ಬಗ್ಗೆ ಜೋರಾಗಿ ಜಂಭಕೊಚ್ಚಿ ಕೊಳ್ಳುತ್ತಿದ್ದರು. ಅವರಿಗೆ ಯಾವ ತೊಂದರೆಯೂ ಜೈಲಿನಲ್ಲಿ ಆಗಿಲ್ಲ ಎನ್ನುತ್ತಿದ್ದರು. ಅವರ ಭರವಸೆ ಅಳಿದು ಹೋಗಿರಲಿಲ್ಲ. ಏಕೆಂದರೆ ಹಳೆಯ ಅತ್ಯಾಚಾರದ ಪ್ರಕರಣಗಳು ತೋರಿಸುವಂತೆ ಆರೋಪಿಗಳಿಗೆ ಶಿಕ್ಷೆಯಾಗಿದ್ದು ಕಡಿಮೆಯೇ!

ಸಾಕ್ಷಿಗಳ ಕುರಿತು ಮಾತನಾಡುವುದಾದರೆ ಅವರಲ್ಲಿ ಭಯ ಉಂಟಾಗಿದೆ. ಮಾನುಷಿಯ ಕೆಲವರು ನ್ಯೂಸೀಮಾಪುರಿಗೆ ಸಾಕ್ಷಿಗಳ ಫೋಟೋ ತೆಗೆದುಕೊಳ್ಳಲು ಹೋದಾಗ (ಇದಕ್ಕೆ ಮುಂಚೆ ಒಪ್ಪಿದವರು) ಮುಂದೆ ಬರಲು ಹೆದರಿದರು. ಒಂದು ಗಂಟೆ ಕಾದರೂ ಒಬ್ಬರೂ ಮುಂದೆ ಬರಲಿಲ್ಲ. ಅದೇ ರಾತ್ರಿ ಮೂವರು ಸಾಕ್ಷಿದಾರರಲ್ಲಿ ಒಬ್ಬಳಾದ ಶಮೀಮ್‌ಳಿಗೆ ಹೊಡೆದುದಲ್ಲದೇ, ಆಕೆಯ ಪಾನ್ ಸ್ಟಾಲ್ ಕೆಡವಿ ಹಾಕಿ, ಆಕೆಯ ಹಣವನ್ನು

ಕದಿಯುಲಾಗಿತ್ತು. ಮೊದಲಿಗೆ ಕೇಸ್‌ನಿಂದ ಹಿಂದೆ ಸರಿದು ಕೊಳ್ಳುವುದಕ್ಕೆ ಲಂಚ ಕೊಡುವುದಾಗಿ ಹೇಳಿದ್ದರೂ ಆಕೆ ಅದನ್ನು ತಿರಸ್ಕರಿಸಿದ್ದರು. ಸಾಕ್ಷಿದಾರಳಾಗಲು ಒಪ್ಪಿ ಕೊಂಡೊಡನೆಯೇ ಪೋಲೀಸರ ಹಿಂಸೆಗೆ ಈಕೆ ಒಳಗಾಗಿ ದ್ದರು. ಆಕೆಯ ಮೇಲೆ ಆಕ್ರಮಣ ಮಾಡಲು ಪ್ರಯತ್ನಿ ಸಿದವರು-ಆಕೆ ಕೇಸ್‌ನಿಂದ ಹಿಂದೆ ಸರಿದುಕೊಳ್ಳದಿದ್ದರೆ ಆಕೆಯ 13 ವರ್ಷದ ಮಗಳು ಹಮೀದಾಳ ಸ್ಥಿತಿಯನ್ನೇ ಅನುಭವಿಸಬೇಕಾಗುತ್ತದೆ ಎಂದು ಹೆದರಿಸಿದ್ದರು. ಆಕೆ ಫಿರ್ಯಾದು ಕೊಡಲು ಪ್ರಯತ್ನಿಸಿದಾಗ ಸ್ಥಳೀಯ ಪೋಲೀಸರು ಆಕೆಗೆ ಸಹಕರಿಸಿರಲಿಲ್ಲ. ಆಕೆ ಬರೆದು ಕೊಟ್ಟಿದ್ದ ಫಿರ್ಯಾದನ್ನು ನಿರ್ಲಕ್ಷ್ಯ ಮಾಡಿದ್ದರು. ಹಾಗೂ ಬರಿಯ ಚುಡಾಯಿಸುವಿಕೆ ಎಂದು ತಳ್ಳಿ ಹಾಕಿ ದ್ದರು. ಆಕೆ ನಾಲ್ಕು ಮಕ್ಕಳಿರುವ ಹಾಗೂ ಕುರುಡು ತಾಯಿ ಇರುವ ವಿಧವೆಯೂಗಿದ್ದರು. ಓಮ್ ಪ್ರಕಾಶ್ ಹಾಗೂ ಮೆಹತಾಬ್ ಸಂಬಂಧಿಗಳು ನಿರಂತರವಾಗಿ ಹೆದರಿಸುತ್ತಿದ್ದರೂ ಆಕೆ ಹಿಂತೆಗೆಯಲಿಲ್ಲ. ಇತ್ತೀಚೆಗೆ ಆಕೆ 'ಹ್ಯೂಮನ್ ರೈಟ್ಸ್ ಕಮಿಷನ್' ಮುಂದೆ ಕೆಲವು ದಿನಗಳ ಹಿಂದೆ ಮೆಹಮೂದ್ ಖಾನ್ ಬಂದು ಹೆದರಿಸಿದು ದಾಗಿಯೂ ಹೇಳಿದರು.

ಅತ್ಯಾಚಾರಕ್ಕೆ ಒಳಗಾದವರಿಗೆ ನ್ಯಾಯ ದೊರಕಿಸ ದಂತೆ ಹಲವಾರು ಹುನ್ನಾರಗಳು ನಡೆಯುತ್ತವೆ. ಹಮೀದಾಳನ್ನು ಬೆಂಬಲಿಸಲು ಪ್ರಯತ್ನಿಸಿದವರಿಗೆಲ್ಲ ಹಿಂಸೆ ಕೊಡಲಾಗಿದೆ. ಇದು ಅತ್ಯಂತ ಘೋರ ಅಪರಾಧ. ಮಗುವಿನ ಮೇಲೆ ನಡೆದ ಅತ್ಯಾಚಾರದ ವಿಹ್ವಲತೆ ಹೋಗಲಾಡಿಸಲು ವಿಶೇಷವಾದ ಕೌನ್‌ಸೆಲಿಂಗ್ ಇರ ಬೇಕೆಂದು ಸಾರ್ವತ್ರಿಕವಾಗಿ ತಜ್ಞರಿಂದ ಒಪ್ಪಿಕೊಂಡ ವಿಚಾರವಾಗಿದ್ದರೂ ಹಮೀದಾಳಿಗೆ ಯಾವುದನ್ನೂ ನೀಡ ಲಾಗಿಲ್ಲ.

ರೋಮಾ ಯಾವ ಕಾರಣದಿಂದಲೂ ಹಿಂಜರಿಯಲಿಲ್ಲ. ಜನವಾದಿ ಮಹಿಳಾ ಸಮಿತಿ, ಶಕ್ತಿ (ಮಕ್ಕಳ ಅತ್ಯಾ ಚಾರದ ಬಗ್ಗೆ ಕೆಲಸ ಮಾಡುವ ಸಂಸ್ಥೆ) ಹಾಗೂ ಪೀಪಲ್ಸ್ ಯೂನಿಯನ್ ಫಾರ್ ಸಿವಿಲ್ ಲಿಬರ್‌ಟೀಸ್ ಜೊತೆಗೆ ಆಕೆ ಪಬ್ಲಿಕ್ ಇಂಟರೆಸ್ಟ್ ಲಿಟಿಗೇಷನ್ ಕೆಳಗಡೆ ಒಂದು ಕೇಸ್ ದಾಖಲು ಮಾಡಿದ್ದಾರೆ. ಅವರು ಪೆಟಿಷನ್ ಹೋಗಿರುವುದು ಈ ಕೆಳಗಿನ ಅಂಶಗಳಿಗಾಗಿ : ಜಾಗ್ರತೆಯಾಗಿ ಟ್ರಯಲ್ ನಡೆಸುವುದು, ಐವರು ಪೋಲೀಸ್ ಆರೋಪಿಗಳನ್ನು ಬಿಡುಗಡೆ ಗೊಳಿಸಿದ ಸಂದರ್ಭಗಳನ್ನು ಮತ್ತೆ ಶೋಧಿಸುವುದು, ಹಮೀದಾಳಿಗೆ ಕೌನ್ಸ್‌ಲಿಂಗ್ ಹಾಗೂ ಸರಿಯಾದ ವೈದ್ಯಕೀಯ ಚಿಕಿತ್ಸೆ ಕೊಡಿಸುವುದು, ಮಗುವಿಗೆ ಮರುವಸತಿ, ಮಗುವನ್ನು ಕಾರಾಗೃಹವಾಸದಿಂದ ಬಿಡುಗಡೆಗೊಳಿಸಿ 'ಚೈಲ್ಡ್ ವೆಲ್‌ಫೇರ್ ಹೋಂಗೆ'-ಕಳಿಸುವುದು, ಮಹಿಳಾ ಗುಂಪುಗಳ ಸದಸ್ಯರಿಗೆ ಟ್ರಯಲ್ ಹಾಗೂ ಹಮೀದಾ ಳನ್ನು ಭೇಟಿಯಾಗಲು ಅನುಮತಿ ನೀಡುವುದು, ಮುಖ್ಯ ಸಾಕ್ಷಿಗಳು ಹಾಗೂ ಭಾಷಾಂತರಕಾರರಿಗೆ ವೈಯಕ್ತಿಕ ರಕ್ಷಣೆ ನೀಡುವುದು ಹಾಗೂ ರೋಮಾರವರನ್ನು ಮತ್ತೆ ಭಾಷಾಂತರಕಾರರಾಗಿ ನೇಮಿಸುವುದು.

ಈ ಪ್ರಕರಣ ಎ.ಬಿ. ಸಹಾರ್‍ಯ ಹಾಗೂ ಸಿದ್ದಿಕೆ ಡೆಲ್ಲಿ ಹೈ ಕೋರ್ಟಿನ ಡಿವಿಜನ್ ಬೆಂಚ್‌ಗೆ ಹಿಯರಿಂಗ್‌ಗೆ ಬಂತು. ನಿರ್ಮಲ್ ಛಾಯಾ ಬಾಲಾಪರಾಧಿಗಳ ಹೋಂ ಆದ್ದರಿಂದ ಹಾಗೂ ಮೂರು ತಿಂಗಳವರೆಗೆ ಮಾತ್ರ ಅಲ್ಲಿ ಇಟ್ಟುಕೊಳ್ಳುವ ಅವಕಾಶವಿರುವುದರಿಂದ ಹಮೀದಾಳನ್ನು ನಿರ್ಮಲ್ ಛಾಯಾದಿಂದ ಕಳಿಸಬಹು ದೆಂದು ನ್ಯಾಯಾಲಯ ಆಜ್ಞೆ ಮಾಡಿತು. (ಹಮೀದಾ ಇಲ್ಲಿ ಎರಡು ವರ್ಷಗಳಿಂದ ಇರುತ್ತಿದ್ದರೂ ಆಕೆಯ ಸಂಬಂಧಿಕರನ್ನಾಗಲೀ ಅಥವಾ ಆಕೆಯ ತಂದೆಯನ್ನಾಗಲೀ ಪತ್ತೆ ಹಚ್ಚುವ ಪ್ರಯತ್ನಗಳೇ ನಡೆದಿರಲಿಲ್ಲ.) ನ್ಯಾಯಾಧೀಶರು PIL ಫೈಲ್ ಮಾಡಿದ ಸಂಸ್ಥೆಗಳಿಗೆ ಆ ಹುಡುಗಿಯನ್ನು ನೋಡಿಕೊಳ್ಳಬಹುದಾದ ಒಂದು ಸ್ವಯಂ ಸೇವಾ ಸಂಸ್ಥೆಯೊಂದಕ್ಕೆ ಸಲಹಿಸಲು ಕೇಳಿತು. ಜಂಗ್ – ಪುರದಲ್ಲಿರುವ ಸ್ವಯಂ ಸೇವಾ ಸಂಸ್ಥೆ ಯೊಂದಕ್ಕೆ ಒಪ್ಪಿಸುವ ಸಲಹೆಯನ್ನು ವಿ.ಎಸ್. ಶರ್ಮ ವಿರೋಧಿಸಿದರು. ಪೆಟಿಶನರ್‍ಸ್ ಇನ್ನೊಂದು ಸಲಹೆ ಇತ್ತರು. ಸರ್ಕಾರ ನಡೆಸುವ ಅಲಕ್ಷಿಸಲ್ಪಟ್ಟ ಮಕ್ಕಳಿಗಾಗಿ ಇರುವ ಹೋಂನಲ್ಲಿ ಬಿಡುವುದಕ್ಕೆ ಸೂಚನೆ ನೀಡ ಲಾಯಿತು. ಅಲ್ಲಿ ಕಾಂಪೌಂಡ್ ಒಳಗಡೆ ಸ್ವತಂತ್ರ ವಾಗಿ ಓಡಾಡಬಹುದಲ್ಲದೇ ಸ್ವತಂತ್ರ ಶಿಕ್ಷಣವನ್ನು ಸಹ ಪಡೆಯಬಹುದೆಂಬುದು ಅವರ ಉದ್ದೇಶವಾಗಿತ್ತು. ಈ ಹೋಂಗೆ ಹಮೀದಾಳನ್ನು ಈಗ ಕಳುಹಿಸಲಾಗಿದೆ. ಈಕೆ ಈ ವರ್ಷದ ಜುಲೈನಲ್ಲಿ ನಡೆಯುವ ನ್ಯಾಯಾಲಯದ ಮುಂದಿನ ಪ್ರೊಸಿಡಿಂಗ್ಸ್‌ಗೆ ಕಾಯುತ್ತಿದ್ದಾಳೆ.

ಹಮೀದಾ ಈಗಾಗಲೇ ಘಟನೆಯ ವಿವರಗಳನ್ನು

ಮೂರು ಬಾರಿ ಹೇಳಿರುವುದರಿಂದ ಆಕೆಯನ್ನು ಕಾರಾಗೃಹದಲ್ಲಿ ಇಡುವ ಅಗತ್ಯವೇ ಕಾಣಿಸುವುದಿಲ್ಲ. ಬಾಂಗ್ಲಾದೇಶದಿಂದ ಇಲ್ಲಿಗೆ ಬಂದು ಆಕೆಯು ಎರಡು ವರ್ಷದ ಬದುಕು ಈಗಾಗಲೇ ನಾಶವಾಗಿರುವುದರಿಂದ ಆಕೆಯ ಮುಂದಿನ ಜೀವನದಲ್ಲಿನ ಮಾನಸಿಕ ಗಾಯಗಳನ್ನು ಎಣಿಸಲೂ ಸಾಧ್ಯವಾಗುವುದಿಲ್ಲ. ಅವಳ ಸಾಕ್ಷಿ, ಪ್ರಮಾಣಗಳನ್ನು ವಿಡಿಯೋ ಟೇಪ್ ಮಾಡಬಹುದು. ಆಕೆಯ ತಂದೆ, ಹಾಗೂ ಸಂಬಂಧಿಗಳು ಆಕೆಯ ಹಿಂತಿರುಗುವಿಕೆಯನ್ನು ಇಷ್ಟಪಡದಿದ್ದಲ್ಲಿ ಆಕೆಯನ್ನು ಆಕೆ ಹುಟ್ಟಿದ ಊರಿಗಾದರೂ ವಾಪಸ್ಸು ಕಳುಹಿಸಬೇಕು. ಮನೆಗೆ ಹಿಂತಿರುಗಿ ಹೋಗುವ ಆಸೆಯನ್ನು ಹಮೀದಾ ವ್ಯಕ್ತಪಡಿಸುತ್ತಲೇ ಇದ್ದಾಳೆ. ಒಮ್ಮೆ ಆಕೆಗೆ ಭದ್ರ ಸ್ಥಳವೊಂದು ದೊರೆತರೆ ನಂತರ ಕೋರ್ಟ್ ಕೇಸ್ ನಿಧಾನ ಗತಿಯಲ್ಲಿ ಇದ್ದರೂ ನಡೆಯುತ್ತದೆ. ಬಾಂಗ್ಲಾದೇಶದ ಬಾಲನಿವಾಸ ಭಾರತಕ್ಕಿಂತ ಏನೂ ಉತ್ತಮವಾಗಿರುವುದಿಲ್ಲ. ಆದರೆ ಕೆಲವು ಕಾಳಜಿಯುಕ್ತ ಬಾಂಗ್ಲಾದೇಶಿಗಳು ಆಕೆಯ ಹಿತಾಸಕ್ತಿಗಳನ್ನು ಗಮನಿಸಬಹುದು. ಆಕೆ ಬಾಂಗ್ಲಾದೇಶದಲ್ಲಿ ಪರಿಚಿತ ಭಾಷೆ ಹಾಗೂ ಸಂಸ್ಕೃತಿಯೊಳಗೆ ಇರುತ್ತಾಳೆ. ಅಷ್ಟೊಂದು ಜನ ಅತ್ಯಾಚಾರಿಗಳು ಇರುವಾಗ ದೆಹಲಿಯಲ್ಲಿ ಆಕೆ ಸಂರಕ್ಷಿತಳಾಗಿರುತ್ತಾಳೆ ಎಂಬುದಕ್ಕೆ ಯಾವ ಗ್ಯಾರಂಟಿಯೂ ಇರುವುದಿಲ್ಲ.

ಈ ವಿಚಾರವನ್ನು ಇಂಡಿಯನ್ ಹ್ಯೂಮನ್‌ರೈಟ್‌ನ ಕಮಿಷನ್ ಮುಂದೆ ಇಡಲಾಗಿದೆ. ಅವರು ಕೂಡಾ ಈ ವಿಚಾರವನ್ನು ಕೈಗೆತ್ತಿಕೊಂಡಿದ್ದಾರೆ. ಆದರೆ ಹಮೀದಾಳಿಗೆ ನ್ಯಾಯ ಸಿಗುತ್ತದೆಯೇ ? ಅಥವಾ ಸಹಜವಾಗಿರುವ ಮಾನವೀಯ ಸತ್ಕಾರವಾದರೂ ಸಿಗುತ್ತದೆಯೇ ? ಆಕೆಗೆ ದೈಹಿಕ ಗಾಯದಿಂದಾಗಿರುವ ಮಾನಸಿಕ ರೋಗವನ್ನು ಮೀರಲಾದರೂ ಸಾಧ್ಯವಾಗುತ್ತದೆಯೇ ? ಅದನ್ನು ಮೀರಲು ಸಾಧ್ಯವಾಗುವಂತಹ ಕೌನ್‌ಸೆಲಿಂಗ್ ಆದರೂ ಆಕೆ ಪಡೆಯುತ್ತಾಳೆಯೇ ? ಆಕೆಯ ಕುಟುಂಬದ ಜೊತೆ ಸೇರಬಲ್ಲಳೆ ? ಅವರಿಗೆ ಈಕೆ ವಾಪಸ್ಸು ಹೋಗುವುದು ಬೇಕೇ ? ಹಮೀದಾಳ ಕತೆಯ ಕೊನೆ ಏನೇ ಆದರೂ ಯಾವುದೂ ಸಹ ಅವಳ ಉಗ್ರಪರೀಕ್ಷೆಯ ನೆನಪುಗಳನ್ನು ಅಳಿಸಿ ಹಾಕುವುದಿಲ್ಲ. ಅಥವಾ ನಾವು ಬದುಕುವ ವ್ಯವಸ್ಥೆಯಲ್ಲಿನ ಕಾನೂನುಗಳನ್ನು ಅಪರಾಧಿಗಳು ತಂತ್ರಗಳ ಮೂಲಕ ಕೊಂಡುಕೊಳ್ಳಬಹುದೆಂಬ ಅಂಶವನ್ನು ಸುಲಭವಾಗಿ ಅಳಿಸಿ ಹಾಕಲಾಗುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಹಮೀದಾಳಿಗೆ ಏನು ನ್ಯಾಯ ಸಿಗುತ್ತದೆ ಎಂಬುದನ್ನು ಕಾದು ನೋಡಬೇಕಾಗಿದೆ.

ಸಂಗ್ರಹಾನುವಾದ : **ಚಂಪಾವತಿ ಹೆಚ್.ಎಸ್.**

---

## ಮಕ್ಕಳ ಮೇಲಿನ ಲೈಂಗಿಕ ಶೋಷಣೆ

(12ನೇ ಪುಟದಿಂದ)

7. ತಪ್ಪು. ಸಾಮಾನ್ಯವಾಗಿ ತಾಯಿಗೆ ತನ್ನ ಮಗು ಶೋಷಣೆಗೊಳಗಾಗುತ್ತಿದೆ ಎಂಬುದು ತಿಳಿದಿರುವುದಿಲ್ಲ. ಕಾರಣ ಮಕ್ಕಳು ತಮ್ಮ ಶೋಷಣೆಯ ಬಗ್ಗೆ ಯಾರಿಗಾಗಲೀ ತಿಳಿಸಲು ಹೆದರುತ್ತಾರೆ.
8. ತಪ್ಪು. ಲೈಂಗಿಕ ಶೋಷಣೆಗೆ ಒಳಗಾದ ಮಗು ಹಲವಾರು ಮಾನಸಿಕ ಹಿಂಸೆಗಳಿಂದ ಬಳಲುತ್ತದೆ. ಇದರಿಂದಾಗಿ ಆಗಾಗ ಸಿಟ್ಟಿಗೇಳುತ್ತದೆ, ಸಿಡಿದೇಳುತ್ತದೆ. ಇವು ಬೇರೆಯವರ ಸಹಾನುಭೂತಿ ಗಳಿಸಿಕೊಳ್ಳಲು ಅಲ್ಲ, ತನ್ನ ನೋವನ್ನು ಎದುರಿಸಲು ಮಾಡುವ ಹೋರಾಟವಾಗಿರುತ್ತದೆ.
10. ತಪ್ಪು. ಲೈಂಗಿಕ ಶೋಷಣೆ ಮಗುವಿನ ಮನಸ್ಸಿನಲ್ಲಿ ಹಾನಿಕರವಾದ ಪರಿಣಾಮಗಳನ್ನು ಉಂಟು ಮಾಡುತ್ತದೆ. ಮಗುವನ್ನು ನಾವು ಮಾತನಾಡಲು ಪ್ರೋತ್ಸಾಹಿಸದಿದ್ದಲ್ಲಿ ಮುಂದೆ ಅದರ ನಡುವಳಿಕೆಯಲ್ಲಿ ವಿಕಾರಗಳು ಕಾಣಿಸಿಕೊಳ್ಳಬಹುದು.
11. ತಪ್ಪು. ಶೋಷಕ ದೊಡ್ಡವನಾದ ಕಾರಣ, ಅಧಿಕಾರದಲ್ಲಿರುವ ಕಾರಣ ಮಗು ತನಗಾದ ಶೋಷಣೆಯನ್ನು ಹೇಳದೆ ಉಳಿದು ಬಿಡುತ್ತದೆ. ಹೇಳಿದ ಮಾತುಗಳನ್ನು ಹಿಂದೆ ತೆಗೆದುಕೊಳ್ಳಲು ಈ ಭಯವೇ ಕಾರಣ.
12. ತಪ್ಪು. ಶೋಷಕ ಪರಿವಾರದ ಸದಸ್ಯ, ಪರಿಚಿತ, ಸ್ನೇಹಿತನಾಗಿರುತ್ತಾರೆ. ಒಟ್ಟಿನಲ್ಲಿ ಅವನು ಮಗುವಿಗಿಂತ ಹಿರಿಯ ಸ್ಥಾನದಲ್ಲಿರುತ್ತಾನೆ.

### ನೆನಪಿರಲಿ

ಹಿಂಸೆ, ಉಪೇಕ್ಷೆ, ಶೋಷಣೆಗಳಿಲ್ಲದ ಸುರಕ್ಷಿತ ಹಾಗೂ ಆರೋಗ್ಯಕರವಾದ ಪರಿಸರಕ್ಕೆ ಮಕ್ಕಳ ಹಕ್ಕಿದೆ ಎಂದು ನಾವೆಲ್ಲ ನಂಬುತ್ತೇವೆ. ಬನ್ನಿ ಒಟ್ಟಿಗೆ ಸೇರಿ ನಮ್ಮ ಹಾಗೂ ಇತರರ ಮಕ್ಕಳನ್ನು ಶೋಷಣೆಯಿಂದ ರಕ್ಷಿಸಲು ಒಂದಾಗೋಣ.

ಮೂಲ : ಸಾಕ್ಷಿ

ಕನ್ನಡಕ್ಕೆ : ಉಷಾ ಬಿ.ಎನ್.

REGD NO. KRNA 271

## ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ

ವಿಳಾಸ :

**" ಮಾನಸ "**
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು-560 067